

ಶ್ರೀ ಗೋವಿಂದಮೂರ್ತಿ ದೇಸಾಯಿಯವರು ತಮ್ಮ ಸಣ್ಣ ಕಥೆಗಳ ಮೂಲಕ ಕನ್ನಡ ಜನತೆಗೆ ಈಗಾಗಲೇ ಸುಪರಿಚಿತರಾಗಿದ್ದಾರೆ. ಅವರಲ್ಲಿ ಕಥೆಯ ಹೊಳಹನ್ನು ಕಾಣುವ ಸುಂದರವಾದ ಊಹಾಶಕ್ತಿಯಿದೆ; ಕಥನ ಸಲೀಲತೆಯಿದೆ, ವಿವರಗಳ ಪ್ರಜ್ಞೆಯಿದೆ. ಭಾಷೆಯ ಜಡತ್ವದಿಂದ ಕಥನದ ಓಟವು ಎಲ್ಲಿಯೂ ಕುಗ್ಗುವದಿಲ್ಲ. ಕಥೆಗೆ ಕಾಲಿಲ್ಲ ಎನ್ನುವಲ್ಲಿ ತನ್ನ ಮುಸಂಬುವ ಆಕರ್ಷಣಶಕ್ತಿಯ ಮೂಲಕ ಕಥೆ ಹೇಳಿದಷ್ಟು ಕೇಳಲು ಸಾಧ್ಯವಿದೆ ಎಂಬ ಅರ್ಥವಿದ್ದರೆ, ಈ ಅಭಿಪ್ರಾಯವು ಶ್ರೀ ದೇಸಾಯಿ ಅವರ ಕಥೆಗಳಿಗ ಸರಿಯಾಗಿಯೇ ಅನ್ವಯಿಸುತ್ತದೆ. ಈ ಕಥನ ಸಂಕಲನದಲ್ಲಿಯ ಕಥೆಗಳನ್ನು ಓದಲು ಪ್ರಾರಂಭಿಸಿದರೆ, ಮುಗಿಸದೆ ಸಂಕಲನವನ್ನು ಬಿಡಬೇಕೆಂದು ಎನಿಸುವದಿಲ್ಲ. ನೀರಸತೆ ಒಂದು ಕಲಾದೋಷವೆಂದು ಆಂಗ್ಲರ ಹೇಳಿಕೆಯಿದೆ; ಈ ಕಥನ ಸಂಕಲನದಲ್ಲಿ ನೀರಸತೆಯ ಸ್ಪರ್ಶ ಕೂಡ ಕಾಣದು. ಕಥೆಗಳಲ್ಲಿ ಮೂಡಿರುವ ಅನೇಕ ಹೆಸರುಗಳನ್ನು ಸಜೀವ ಚೇತನಶಕ್ತಿಗಳಾಗಿ ಕಾಣುವಂತೆ ಮಾಡಿದ ಶ್ರೇಯಸ್ಸು ಶ್ರೀ ದೇಸಾಯಿಯವರಿಗಿದೆ.

ಪ್ರತಿಭಾ ಗ್ರಂಥಮಾಲೆ : ವರುಷ ೧೫, ಕಿರಣ ೨

# ಶಿ ಲಾ ಮು ಖ

( ಕಥಾಸಂಕಲನ )







ಶ್ರೀ. ದೇಸಾಯಿ ಗೋವಿಂದಮೂರ್ತಿ



ಸಮಾಜ ಪುಸ್ತಕಾಲಯ : ಧಾರವಾಡ.

ಮೊದಲಚ್ಚು
ನವೆಂಬರ್
೧೯೫೭

ಪ್ರಕಾಶಕರು–ಮುದ್ರಕರು :
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ
ಪ್ರತಿಭಾ ಮುದ್ರಣ
ಧಾರವಾಡ

ಬೆಲೆ: ರೂ. ೧.೨೫

# ಮುನ್ನುಡಿ

ನನ್ನ ತರುಣ ಮಿತ್ರರಾದ ಶ್ರೀ. ಗೋವಿಂದಮೂರ್ತಿ ದೇಸಾಯಿ ಅವರು ತಮ್ಮ ಕಥಾಸಂಕಲನವಾದ 'ಶಿಲಾಮುಖ' ಕ್ಕೆ ಮುನ್ನುಡಿ ಬರೆಯಬೇಕೆಂದು ಅಪೇಕ್ಷಿಸಿದಾಗ, ನಾನು ಸಂತೋಷದಿಂದ ಒಪ್ಪಿಕೊಂಡೆ.

ಶ್ರೀ ಗೋವಿಂದಮೂರ್ತಿ ದೇಸಾಯಿಯವರು ತಮ್ಮ ಸಣ್ಣ ಕಥೆಗಳ ಮೂಲಕ ಕನ್ನಡ ಜನತೆಗೆ ಈಗಾಗಲೇ ಸುಪರಿಚಿತರಾಗಿದ್ದಾರೆ. ಅವರಲ್ಲಿ ಕಥೆಯ ಹೊಳಹನ್ನು ಕಾಣುವ ಸುಂದರವಾದ ಊಹಾಶಕ್ತಿಯಿದೆ, ಕಥನ ಸಲೀಲತೆಯಿದೆ, ವಿವರಗಳ ಪ್ರಜ್ಞೆಯಿದೆ. ಭಾಷೆಯ ಜಡತ್ವದಿಂದ ಕಥನದ ಓಟವು ಎಲ್ಲಿಯೂ ಕುಗ್ಗುವುದಿಲ್ಲ. ಕಥೆಗೆ ಕಾಲಿಲ್ಲ ಎನ್ನುವಲ್ಲಿ—ತನ್ನ ಮನಂ ಬುಗುವ ಆಕರ್ಷಣಶಕ್ತಿಯ ಮೂಲಕ—ಕಥೆ ಹೇಳಿದಷ್ಟೂ ಕೇಳಲು ಸಾಧ್ಯ ವಿದೆ ಎಂಬ ಅರ್ಥವಿದ್ದರೆ, ಈ ಅಭಿಪ್ರಾಯವು ಶ್ರೀ ದೇಸಾಯಿ ಅವರ ಕಥೆ ಗಳಿಗೆ ಸರಿಯಾಗಿಯೇ ಅನ್ವಯಿಸುತ್ತದೆ. ಈ ಕಥನ ಸಂಕಲನದಲ್ಲಿಯ ಕಥೆ ಗಳನ್ನು ಓದಲು ಪ್ರಾರಂಭಿಸಿದರೆ, ಮುಗಿಸದೆ ಪುಸ್ತಕವನ್ನು ಬಿಡಬೇಕೆಂದು ಎನಿಸುವದಿಲ್ಲ. ನೀರಸತೆ ಒಂದು ಕಲಾದೋಷವೆಂದು ಆಂಗ್ಲರ ಹೇಳಿಕೆಯಿದೆ; ಈ ಕಥನ ಸಂಕಲನದಲ್ಲಿ ನೀರಸತೆಯ ಸ್ಪರ್ಶ ಕೂಡ ಕಾಣದು.

ಇನ್ನೊಂದು ಮಾತು: ನಮ್ಮ ಕನ್ನಡ ನಾಡಿಗೆ ಸುಂದರವಾದ ಗತ ವೈಭವವಿದ್ದಂತೆ—ನಮ್ಮ ನಾಡಿನ ಸ್ಥಳಗಳಿಗೂ ಮಲ್ಲಿಗೆಯ ಮೋಹಕತೆಯಿದೆ, ವೀಣೆಯ ಮಂಜುಳತೆಯಿದೆ. ಮೊನ್ನೆ ತಾನೆ ಧಾರವಾಡಕ್ಕೆ ಆಗಮಿಸಿದ ಮರಾಠಿ ಕವಿ ಪ್ರಾಧ್ಯಾಪಕರೊಬ್ಬರು, ನೀಳವಾಗಿ ಬೆಳೆದು ಉದ್ಬುದ್ಧವಾದ ಶುಭ್ರ ಹೂಗಳನ್ನು ಕೊಡುತ್ತಿರುವ, ದಾರಿಯ ಸಾಲಿನಗುಂಟ ಇರುವ ಗಿಡಗಳ ಹೆಸ ರೇನೆಂದು ಕೇಳಿದರು. ನಾನು "ಗಗನಮಲ್ಲಿಗೆ" ಎಂದೆ. ತಕ್ಷಣ ಅವ ರೆಂದರು: "ನಿಮ್ಮ ಕನ್ನಡ ಜನ ಯಾವಾಗಲೂ ಕವಿಹೃದಯಿಗಳು. ಗಗನ ಮಲ್ಲಿಗೆ! ಎಂಥ ಸುಂದರ ರೊಮ್ಯಾಂಟಿಕ್ ಹೆಸರು. ನೆಲದ ಜಂಜಡವನ್ನು ಬಿಟ್ಟು, ಉಳಿದ ಗಿಡಗಳ ಸಂಗವನ್ನು ತೊರೆದು, ಮುಗಿಲ ಮೋಹದ ಆದರ್ಶದ

ಕೂಡ ಇರಬಯಸಿದ ಈ ಶುಭ್ರ ಹೂಗಳಿಗೆ ಯಥಾರ್ಥವಾದ ಹೆಸರನ್ನೇ ನಿಮ್ಮ ಜನರು ಕೊಟ್ಟಿದ್ದಾರೆ. "ಆದೇ ನಮ್ಮ ಮರಾಠಿಯಲ್ಲಿ ನೋಡಿರಿ. ಇದಕ್ಕೆ 'ಬೂಚಾಚಿ ಝಾಡ್' ಎನ್ನುತ್ತಾರೆ" ಎಂದರು. ನಾನು "ಯಾಕೆ?" ಅಂದೆ. "ಈ ಗಿಡದ ಬೊಡ್ಡೆಯಿಂದ ಬಾಟಲಿಯ ಬೂಚನ್ನು ತಯಾರಿಸುತ್ತಾರೆ, ಅದಕ್ಕೇ" ಎಂದರು ಪ್ರಾಧ್ಯಾಪಕರು. "ನಿಮ್ಮ ಜನ ಬೊಡ್ಡೆಯನ್ನು ನೋಡಿ ಬೂಚಿಗಾಗಿ ಅದನ್ನು ಉಪಯೋಗಿಸಿಕೊಂಡರು. ನಮ್ಮವರು ಮಾತ್ರ ಬರೀ ಹೂವನ್ನೇ ನೋಡಿ ಬೊಡ್ಡೆಯನ್ನು ಕೂಡ ಮರೆತರು. ಒಂದು ಉಪಯುಕ್ತತೆ; ಮತ್ತೊಂದು ಬರೀ ಆದರ್ಶ" ಎಂದೆ. ಅವರೂ "ಸರಿ" ಎಂದು ನಕ್ಕರು. ನಾನೂ ನಕ್ಕೆ.

ಆದರೂ ಮತ್ತೊಂದು ಸಲ ವಿಚಾರ ಮಾಡಿದಾಗ ಎನಿಸಿತು. ಬರೀ ಆದರ್ಶವಾದರೇನಾಯಿತು? "ಗಗನಮಲ್ಲಿಗೆ" ಎಷ್ಟು ಸುಂದರವಾದ ಹೆಸರು. ಕನ್ನಡ ನಾಡಿನಲ್ಲಿ ಇಂಥ ಸುಂದರವಾದ ಹೆಸರುಗಳ ಬಳ್ಳಿಯೇ ಹಬ್ಬಿದೆ. ಎಂಥ ಸುಂದರವಾದ ಹೆಸರಿನ ಹೂವುಗಳು! ಅಂತರವಳ್ಳಿ, ಹೂಬಳ್ಳಿ, ಆಕಾಶಗಂಗೆ, ಪಾತಾಳಗಂಗೆ, ಪಾಪನಾಶಿ, ಧವಳಗಂಗೆ—ದೇವನದಿ ಗಂಗೆ ಯಾವ ಯಾವ ರೂಪದಲ್ಲಿ ಕನ್ನಡನಾಡಿನಲ್ಲಿ ಹರಿದಿದ್ದಾಳೆ! ಜನರನ್ನು ಪಾವನರನ್ನಾಗಿ ಮಾಡಿದ್ದಾಳೆ! ಹೊಸಗನ್ನಡ ಕವಿಯೊಬ್ಬರು ಹೇಳಿದ ಹಾಗೆ—

ಬೆಡಕಿಹಾಳ ಬೋರಗಾವಿ
    ನೇಜ, ಭೋಜ ಗಳತಗಿ,
ಶಿರದವಾಡ ಜಾನವಾಡ
    ಶಮನೆವಾಡ ಸದಲಗಿ,
ಎನಿತು ಚಂದ....ಚಂದ....ಹಳ್ಳಿ!
    ಹೆಸರಬಳ್ಳಿ ಹಬ್ಬಿದೆ!
ಚಾಚಿ ಕುಡಿಯ ಬಿಡುತ ಮಿಡಿಯ
    ನಾಡಗುಡಿಯ ತಬ್ಬಿದೆ.

ಶ್ರೀ ದೇಸಾಯಿ ಅವರು ಇಂಥ ಹೆಸರಿನ ಸೌಂದರ್ಯಕ್ಕೆ ಮಾರು ಹೋಗಿದ್ದಾರೆ—ಶಿಲಾಮುಖ, ಶಿವಗಂಗೆ, ಶಿವಪಾರ್ವತಿ, ಶ್ರಾವಣೂರು (ಸವ

ಣೂರು), ಹೊಲತಿಕೋಟಿ ಇತ್ಯಾದಿ. ಈ ಎಲ್ಲ ಊರುಗಳಿಗೂ ತಮ್ಮದೇ ಆದ ಇತಿಹಾಸವಿದೆ; ಐತಿಹ್ಯವಿದೆ. ಅವನ್ನು ಶಿಲಾಶಾಸನಗಳು ಸಾರಬಹುದು, ಪ್ರಾಚೀನ ಗ್ರಂಥಗಳು ನಾರಬಹುದು, ಇಲ್ಲವೆ ಸ್ಥಲ ಪುರಾಣಗಳು ಹೇಳ ಬಹುದು.

ಹಲವು ಸಲ ಶ್ರೀ ದೇಸಾಯಿ ಅವರು ಊಹಿಸಿದಂತೆ—ಆ ಆ ಊರು ಗಳ ಬಗ್ಗೆ ನಡೆದಿರಲಾಗದ ಕಥೆಗಳನ್ನೂ, ಆ ಆ ಹೆಸರುಗಳ ಸುತ್ತಲೂ ಹಲವು ಐತಿಹ್ಯಗಳನ್ನೂ ಹೆಣೆಯಬಹುದು. ಯಾವುದೋ ವ್ಯಕ್ತಿಯಾಗಿಯೋ, ಮರ ವಾಗಿಯೋ ಶ್ರೀ ದೇಸಾಯಿ ಅವರು ಈ ಊರುಗಳ ಬಗ್ಗೆ ಕಂಡ ಚಿತ್ರಗಳೇ ಅರಳಿ ಇಲ್ಲಿ ಕಥೆಗಳಾಗಿವೆ.

ಇಂಥ ಒಳ್ಳೆಯ ಕಥೆಗಳಲ್ಲಿ ಶಿಲಾಮುಖ, ಶಿವಗಂಗೆ, ಕಲ್ಲುಗೋರಿ, ಜೋಡು ಗೋರಿ, ಸ್ವರ್ಗಸುಖ ಇವು ನನ್ನ ಮನಸ್ಸನ್ನು ಹಿಡಿದವು. ಇವು ಗಳಲ್ಲಿ ಮಾನವೀಯತೆಯಿದೆ, ದೈವಪ್ರಜ್ಞೆಯಿದೆ. ನಮ್ಮ ಜನ ಎಂದಿನಿಂದಲೂ ದೇವಸಾಕ್ಷಿಯಾಗಿ ಕೆಲಸ ಮಾಡಿದವರು. ಅವರು ಮಾಡುವ ಪ್ರತಿ ಕೆಲಸ ದಲ್ಲಿಯೂ ದೈವಸಾಕ್ಷಿಯಿದೆ. ನಮ್ಮ ನೆಲದ ಪ್ರತಿ ಕಣಕ್ಕೂ ರಾಮಾಯಣ, ಮಹಾಭಾರತ, ಪಾರ್ವತಿ-ಪರಮೇಶ್ವರರ ಸಂಬಂಧವನ್ನು ನಾವು ಹೇಳುತ್ತೇವೆ. ಪ್ರತಿ ಹಳ್ಳಿಯವರಿಗೂ ಶ್ರೀರಾಮಚಂದ್ರನು ತಮ್ಮ ಹಳ್ಳಿಯಲ್ಲಿ ತಂಗಿದನೆಂದು ಅಭಿಮಾನ ತಾನೆ. ವಾಲಿಯ ಭಂಡಾರ; ಸೀತೆಯ ಸೆರಗು; ಸೀತೆಯ ಮನೆ– ನಿಜವಹುದೋ ಅಲ್ಲವೋ ? ಆದರೆ, ನಮ್ಮ ಜನಮನದಲ್ಲಿ ಮಾತ್ರ ಇವೆಲ್ಲ ಶ್ರೀರಾಮ ಪಾದರೇಣು ಪವಿತ್ರ ಸ್ಥಳಗಳು.

ಶಿಲಾಮುಖದ ಕೂಡಲಪ್ಪ, ಶಿವಗಂಗೆಯ ಶಿವಪ್ಪ, ಶಿವಪಾರ್ವತಿಯ ಸಂಜಿ, ಕಲ್ಲುಗೋರಿಯ ರೂಪಮತಿ, ಜೋಡು ಗೋರಿಯ ಬಾದಶಹ, ಹೊಲತಿ ಕೋಟಿಯ ರಂಗನಾಯಕಿ, ಸಾವಿರಗತ್ತಿಯ ಗಂಗಾದೇವಿ, ಮಹಾಲಿಂಗದ ಲಂಬಾಣಿಗರು, ಸ್ವರ್ಗಸುಖದ ಚಿನ್ನ ಮತ್ತು ಸ್ವರ್ಣರು—ಎಲ್ಲರೂ ದೈವೀ ಪ್ರೇರಣೆ ಮತ್ತು ಕೃಪೆ ಇದ್ದ ಜನರು, ದೈವಸಾಕ್ಷಿಯಾಗಿ ದುಡಿಯುವವರು. ಇಷ್ಟೇ. ಇವರಲ್ಲಿ ಬಹಳ ಜನ ಸುಮ್ಮನೇ ಸತ್ತರೇನೋ ಅನಿಸುತ್ತದೆ. ಆದರೆ ಸಾವು ಬದುಕಿನ ಸ್ಥಿತಿಯನ್ನು ಅವರು ಮೀರಿದ್ದರೇನೋ ಎಂದು ಸಮಾಧಾನ

ಹಚ್ಚಿಕೊಳ್ಳಬೇಕಾಗಿದೆ. ಹೀಗಾಗಿ, ಶ್ರೀ ದೇಸಾಯಿಯವರ ಈ ಕಥನಗಳಲ್ಲಿ ಶಿರಹಟ್ಟಿ, ಸವಣೂರು, ಡಂಬಳ ಮೊದಲಾದ ಹೆಸರುಗಳು, ಬರಿಯ ರೇಲ್ವೆ ಬೋರ್ಡಿನ ಮೇಲೆಯೋ ಇಲ್ಲವೆ ಬಸ್‌ಸ್ಟ್ಯಾಂಡಿನ ಬೋರ್ಡಿನ ಮೇಲೆಯೋ ಬರೆದ ಸ್ಥಳಗಳ ಹೆಸರುಗಳು ಮಾತ್ರವಾಗಿರದೆ, ಸಜೀವ ಚೇತನಶಕ್ತಿಗಳಾಗಿ ಕಾಣುವಂತೆ ಮಾಡಿದ ಶ್ರೇಯಸ್ಸು ಶ್ರೀ ದೇಸಾಯಿಯವರಿಗಿದೆ.

ಸಾಹಿತ್ಯವು ನಾವು ನೋಡಿದ್ದನ್ನು ಹೆಚ್ಚು ಅಂದವಾಗಿಯೂ ಮತ್ತು ಅರ್ಥಪೂರ್ಣವಾಗಿಯೂ ಕಾಣುವಂತೆ ತೋರಿಸುವದಕ್ಕಿಂತ ಮತ್ತೆ ಹೆಚ್ಚು ಏನನ್ನು ಮಾಡಬಹುದು ? ಶ್ರೀ ದೇಸಾಯಿ ಅವರ ಇತರ ಪ್ರಕಟನೆಗಳು ಶೀವ್ರ ಹೊರಬರಲಿ ಎಂದು ಮಾತ್ರ ನಾನು ಆಶಿಸುತ್ತೇನೆ. ಇತಿ ಶಮ್.

ಎಸ್. ಎಸ್. ಕಾಲೇಜ,
ಧಾರವಾಡ.
೮—೧೧—೧೯೫೭.

ರಾ. ಯ. ಧಾರವಾಡಕರ.

# ನನ್ನ ನುಡಿ

ಈ ಶಿಲಾಮುಖದಲ್ಲಿ ಪ್ರಾದುರ್ಭವಿಸಿದ ಹತ್ತೂ ಕಥೆಗಳು ಜಾನಪದದ ಜಾಡು ಹಿಡಿದು ನಮ್ಮ ನಾಡಿನ ಪ್ರಾಚೀನ ಸಂಪ್ರದಾಯ ಮತ್ತು ಸಂಸ್ಕೃತಿಗಳ ಚಿತ್ರಗಳನ್ನು ಕೊಡಲೆಳಿಸುತ್ತವೆ. ಧರ್ಮದ ಪರಂಪರೆಯಲ್ಲಿ ಧೃತಿಯನ್ನಿಟ್ಟು, ದೇವರ ಅಸ್ತಿತ್ವದಲ್ಲಿ ಶ್ರದ್ಧೆಯನ್ನಿರಿಸಿ, ಪವಾಡಗಳಲ್ಲಿ ಪ್ರಸ್ಫುಟವಾದ ವಿಶ್ವಾಸವನ್ನು ತಾಳಿ ತಲೆಮಾರುಗಳಿಂದಲೂ ತಮ್ಮ ಬಾಳನಂಬಿಗೆಯನ್ನು ಅಳಿಸದಂತೆ ಉಳಿಸಿಕೊಂಡು ಸುವ್ಯವಸ್ಥಿತವಾದ ಸಮಾಜವನ್ನು ಕಟ್ಟಿಕೊಂಡು ಹೊರಟ ಹಳ್ಳಿಗರ ಜೀವನಚಿತ್ರಗಳನ್ನು ಬಿಡಿಸುವಲ್ಲಿ ವಾಸ್ತವತೆ ಕಥೆಗಳಿಂದ ಬಹುದೂರ ಸರಿದಿರಬಹುದು. ಕಥಾರಚನೆಯಲ್ಲಿ ಯಥಾರ್ಥತೆಗೆ ಪ್ರಧಾನ ಗಮನವನ್ನಿತ್ತು ನಗ್ನಚಿತ್ರಗಳನ್ನು ಬಿಡಿಸಲೆಳಿಸಲು ಸಿದ್ಧರಾಗುವ ಶುದ್ಧವಾಸ್ತವವಾದಿಗಳಿಗೆ ಈ ಜಾತಿಯ ಕಥೆಗಳು ಹಿಡಿಸದಿರಬಹುದು. ಅಂತಲೆ ಮೊದಮೊದಲು ಇಂಥ ಕಥೆಗಳನ್ನು ಬರೆದಾಗ ಉತ್ಸಾಹದೊಡನೆ ನಿರುತ್ಸಾಹ, ಹೊಗಳಿಕೆಯೊಡನೆ ತೆಗಳಿಕೆ, ನಗುವಿನೊಡನೆ ಅಳುವನ್ನು ಕಟ್ಟಿಕೊಂಡು ಪ್ರಸ್ಥಾನವನ್ನು ಬೆಳೆಯಿಸಿದೆ. ಮುಂದುಮುಂದಕ್ಕೆ ಬಂದಂತೆ ಇಂಥ ಬಟ್ಟೆಯಲ್ಲಿ ಇದಾಗಲೇ ಬಹು ದೂರ ಕ್ರಮಿಸಿ, ಬಹು ರೀತಿ ಶ್ರಮಿಸಿ ಕಥಾಪ್ರಪಂಚದಲ್ಲಿ ಒಂದು ವಿಶಿಷ್ಟ ಸ್ಥಾನವನ್ನಲಂಕರಿಸಿದವರು ಬಿಟ್ಟ ಪರಂಪರೆಯ ಹೆಜ್ಜೆಯ ಗುರುತುಗಳನ್ನು ಹಿಡಿದು, ಪರೋಕ್ಷವಾಗಿ ಅವರ ಆಶೀರ್ವಾದ ರಕ್ಷೆ ಪಡೆದು ಪ್ರಯಾಣವನ್ನು ಮುಂದುವರಿಸಿದ್ದೇನೆ.

ಕಥೆಗಳಲ್ಲಿ ಕಾಣುವ ಐತಿಹ್ಯಗಳನ್ನು ಕಂಡು ಅನೇಕರು ಇಲ್ಲಿಯ ಕಥಾವಸ್ತುಗಳು ಯಾವವಾದರೂ ಇತಿಹಾಸಕ್ಕೆ ಶರಣು ಹೋಗಿಯೋ ಅಥವಾ ಯಾವದಾದರೂ ವ್ಯಕ್ತಿಯ ಮುಖದಿಂದ ಕೇಳಿಯೋ ಬಳೆದು ಬಂದಿರಬೇಕೆಂದು ಶಂಕೆ ತಾಳಿದ್ದಾರೆ. ಆದರೆ ಹೆಸರಿನ ಮೋಹದಿಂದ ನನಗೆ ಪರಿಚಯವಿದ್ದ ಕೆಲ ದೇವಾಲಯ ಮತ್ತು ಸ್ಥಳಗಳ ಹೆಸರುಗಳನ್ನೆತ್ತಿ, ಆ ಭಿತ್ತಿಯ ಮೇಲೆ ಐತಿಹಾಸಿಕ ಅಥವಾ ಪೌರಾಣಿಕ ಘಟನೆಗಳಂತೆ ಭಾಸವಾಗುವ ವರ್ಣಪಾತ್ರೆ

ಯಲ್ಲಿ ಕಲ್ಪನೆಯ ಕುಂಚವನ್ನಿದ್ದಿ ನನ್ನವೇ ಆದ ಕೆಲ ಚಿತ್ರಗಳನ್ನು ತೆಗೆಯಲು ಪ್ರಯತ್ನಿಸಿದ್ದೇನೆ.

ಇಲ್ಲಿ ಮೂಡಿರುವ ಕಥೆಗಳನ್ನು ನಾನು ಬರೆದಾಗಲೆಲ್ಲ ಓದಿ ನನ್ನಷ್ಟೇ ಸಂತೋಷಗೊಂಡು, ನನ್ನ ಕಥಾವಾಹಿನಿಯು ಮುಂದುಮುಂದಕ್ಕೆ ಪ್ರವಹಿಸು ವಂತೆ ಸ್ಫೂರ್ತಿಯೊಡನೆ ಸಹಾಯ, ಸೋದರವಾತ್ಸಲ್ಯದೊಡನೆ ಸಹಕಾರಗಳ ನ್ನಿತ್ತ ನನ್ನ ತಂಗಿ ಪದ್ಮಳು ನನ್ನ ಮೇಲೆ ಭಾರವಾದ ಉಪಕಾರದ ಋಣ ವನ್ನು ಹೊರಿಸಿದ್ದರಿಂದ ನಾನಿಲ್ಲಿ ಅವಳನ್ನು ನೆನೆಯದಿರಲಾರೆ.

ನನ್ನ ಸಂಕಲನವನ್ನು ಕಾಣುವಲ್ಲಿ ನನಗಿಂತಲೂ ಹಿರಿದಾದ ಆಶೆಯನ್ನಿ ರಿಸಿಕೊಂಡು, ನನ್ನ ಕಾಲೇಜು ಜೀವನದಿಂದಲೇ ನನ್ನ ಸಾಹಿತ್ಯಿಕ ಚಟುವಟಿಕೆ ಗಳಲ್ಲಿ ಆಸ್ಥೆ ತಾಳಿ ಈ ಸಂಕಲನಕ್ಕೆ ಮುನ್ನುಡಿಯ ರಕ್ಷೆಯನ್ನಿತ್ತು ಆಶೀರ್ವದಿ ಸಿದ ನನ್ನ ಪೂಜ್ಯ ಗುರುಗಳಾದ ಪ್ರಾಚಾರ್ಯ ಶ್ರೀ. ರಾ. ಯ. ಧಾರವಾಡಕರ ರನ್ನು ನಾನೆಷ್ಟು ನೆನೆದರೂ ಕಡಿಮೆಯೇ.

ಕಾಲಕಾಲಕ್ಕೆ ಕಥೆಗಳನ್ನು ಪ್ರಕಟಿಸಿದ 'ಕರ್ಮವೀರ' ಮತ್ತು 'ಜಯಂತಿ' ಸಂಪಾದಕರಿಗೂ, ಮುಖಚಿತ್ರವನ್ನು ಬರೆದುಕೊಟ್ಟ ಕಲಾವಿದ ಶ್ರೀ. ದತ್ತ ಆರ್ಕಸಾಲಿಯವರಿಗೂ ಮತ್ತು ಮುದ್ರಣ ಕಾರ್ಯದಲ್ಲಿ ನೆರವನ್ನಿತ್ತ ಶ್ರೀ. ಮೇವುಂಡಿ ಮಲ್ಲಾರಿಯವರಿಗೂ ನಾನು ತುಂಬಾ ಉಪಕೃತನಿರುವೆ.

ಗೆಳೆಯರಾದ ಶ್ರೀ. ವೆಂ. ಮು. ಜೋಶಿಯವರ ಸ್ನೇಹದ ಹಂಬಲ ಹಾಗು ಪ್ರತಿಭಾ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಭಾಲಚಂದ್ರ ಘಾಣೇ ಕರರ ಸಹಾಯದ ಬೆಂಬಲ ದೊರೆಯದೆ ಹೋಗಿದ್ದರೆ ಬಹುಶಃ ಈ ಕಥಾಸಂಕ ಲನವು ಬೆಳಕು ಕಾಣುತ್ತಿರಲಿಲ್ಲವೇನೋ !

ಧಾರವಾಡ
೮-೧೧-೧೯೫೭. } ಗೋವಿಂದಮೂರ್ತಿ ದೇಸಾಯಿ

# ಅ ರ್ಪ ಣೆ.

ನಾನಾರ ನೆರಳಲ್ಲಿ

ಬೆಳೆದು, ಬೆಳೆಯಬೇಕಾಗಿದೆಯೋ

**ನನ್ನ ಆ ತಾಯಿಗೆ**

ಈ ಕಥಾಸಂಕಲನದ

ಸಮರ್ಪಣೆ.

# ಪರಿವಿಡಿ




# ಶಿಲಾಮುಖ

ವರದಾ ಹಾಗು ಧರ್ಮಾ ನಾಗನೂರಿನ ಬಳಿ ಒಬ್ಬರನ್ನೊಬ್ಬರು ಅಪ್ಪಿ ಕೊಂಡು ಸಂಗಮದಲ್ಲಿ ಕ್ಷಣಹೊತ್ತು ಮಾತನಾಡಿ ಮುಂದೆ ಏಕಮುಖವಾಗಿ ಹರಿಯುತ್ತಾರೆ. ಅಂತಲೇ ಸಂಗಮದಲ್ಲಿ ಜಲದ ಗರ್ಜನೆ ಹೆಚ್ಚಿದೆ. ವರದೆಯ ಒಂದು ದಂಡೆಗೆ ನಾಗನೂರು, ಇನ್ನೊಂದು ದಂಡೆಗೆ ಕೂಡಲವು ನಿಂತಿವೆ. ಒಂದೇ ಕೂಗಳತೆಯಲ್ಲಿ ಎರಡೂ ಊರು ನಿಂತಿದ್ದರೂ ಪ್ರತಿನಿತ್ಯವೂ ಅಲ್ಲಿಯ ಜನರು ಒಬ್ಬರ ಮುಖವನ್ನು ಒಬ್ಬರು ನೋಡಬೇಕಿದ್ದರೂ ಪರಸ್ಪರ ದ್ವೇಷಾ ಸೂಯೆಗಳಲ್ಲಿ ಕಾಲವನ್ನು ನೂಕುತ್ತಿವೆ. ಆ ಎರಡೂ ಗ್ರಾಮಗಳ ಮಧ್ಯೆ ತಲೆತಲಾಂತರದಿಂದ ವ್ಯಾಜ್ಯವು ಬೆಳೆದುಬಂದಿದೆಯಂತೆ. ಬೇಸಿಗೆಯಲ್ಲಿ ಪ್ರವಾ ಹವು ಹರಿಗಡಿದು ಹಾದಿಯಾದರೂ ಒಂದೂರಿನವರು ಒಂದೂರಿಗೆ ಹೋಗುವ ದಿಲ್ಲ. ಆ ಎರಡೂ ಗ್ರಾಮಗಳಲ್ಲಿ ಬೀಗತನವಾಗುವಂತಿಲ್ಲ. ಕೂಡಲದ ನದೀ ದಂಡೆಗಿದ್ದ ಸಂಗಮೇಶನ ದೇಗುಲಕ್ಕೆ ಬೇರೂರಿಂದ ಸಹಸ್ರಾರು ಜನರು ಬಂದರೂ ನಾಗನೂರಿನವರು ಅಲ್ಲಿಗೆ ಹೋಗುವಂತಿಲ್ಲ. ಇಂತಹ ದ್ವೇಷವನ್ನು ಅಲ್ಲಿಯ ಜನರು ತಮ್ಮ ಮಕ್ಕಳು ಮೊಮ್ಮಕ್ಕಳಿಗೂ ತುಂಬುತ್ತಾರೆ. ಸುಮಾರು ಎರಡು ತಲೆಮಾರಿಸಿಂದ ಈ ದ್ವೇಷವು ಬೆಳೆದುಬಂದಿದೆಯೆಂದು ಹಿರಿಯರು ಹೇಳುತ್ತಾರೆ.

ಸಂಕ್ರಮಣದ ಕರಿಯ ದಿವಸ ಕೂಡಲ ಸಂಗಮೇಶನ ಜಾತ್ರೆ ಜರಗು ತ್ತದೆ. ಅಂದು ಸಹಸ್ರಾರು ಜನರು ನೆರೆಯುತ್ತಾರೆ. ಕರಿಯ ಹಿಂದಿನ ದಿವಸ ಜನರು ಬಂದು, ಕರಿಯ ದಿವಸ ನದಿಯಲ್ಲಿ ಮಿಂದು ಅಲ್ಲಿಯ ಅಯ್ಯನವರಿಗೆ ದಕ್ಷಿಣೆಯನ್ನಿತ್ತು, ಸಂಗಮೇಶನಿಗೆ ತಮ್ಮ ಕಾಣಿಕೆಗಳನ್ನಿತ್ತು ಮಧ್ಯಾಹ್ನದ

ಊಟವನ್ನು ಮಾಡಿ ತಮ್ಮೂರಿಗೆ ಮರಳಿ ಹೋಗುತ್ತಾರೆ. ಕೇವಲ ನಾಲ್ಕಾರು ತಾಸಿನ ಜಾತ್ರೆಗೆ ಇಷ್ಟೊಂದು ಜನರು ನೆರೆಯುವದನ್ನು ನೀವೆಲ್ಲಿಯೂ ಕಂಡಿರ ಲಾರಿರಿ. ಒಂದು ತಿಂಗಳಿಂದಲೂ ಈ ಚಿಕ್ಕ ಜಾತ್ರೆಗಾಗಿ ಜನರು ಸನ್ನಾಹ ಮಾಡುತ್ತಾರೆ. ಬಹು ಸಂಭ್ರಮಪಟ್ಟುಕೊಂಡು ಹಳ್ಳಿಗರು ಬರುತ್ತಾರೆ. ಇಂತಹ ಜಾತ್ರೆ ನಡೆದಾಗ ನಾಗನೂರಿನ ಜನರು ತಮ್ಮೂರಿನ ನದೀ ದಂಡೆಯ ಮೇಲೆಯೇ ನಿಂತು ಜಾತ್ರೆಯನ್ನು ನೋಡುತ್ತಾರೇ ವಿನಾ ಅಲ್ಲಿಗೆ ಬರುವದಿಲ್ಲ. ಇದಕ್ಕೆ ಹಿಂದಿನ ದ್ವೇಷವೇ ಕಾರಣ.

ಇನ್ನೊಂದು ಈ ಜಾತ್ರೆಯ ವೈಶಿಷ್ಟ್ಯವೆಂದರೆ, ಭಕ್ತರು ನದಿಯಲ್ಲಿ ಮಿಂದು ಅಲ್ಲಿಯೇ ತಲೆ ತಗ್ಗಿಸಿಕೊಂಡು ಕುಳಿತಿರುತ್ತಾರೆ. ಅಯ್ಯನವರು ಅವರ ತಲೆಯ ಮೇಲೆ ತಮ್ಮ ಬಲಗಾಲನ್ನು ಇಟ್ಟು ಜಲತರ್ಪಣವನ್ನು ಬಿಡು ತ್ತಾರೆ. ನಂತರ ತಮ್ಮ ದಕ್ಷಿಣೆಯನ್ನು ಸ್ವೀಕರಿಸಿ ಕಾಲನ್ನು ತೆಗೆಯುತ್ತಾರೆ. ಇಂದಿಗೂ ಈ ರೂಢಿಯಲ್ಲಿ ಜನರ ನಂಬಿಕೆಯುಂಟು. ಜಾತ್ರೆಗೆ ಬಂದು ಗುರುಗಳ ಪಾದವನ್ನು ತಲೆಯ ಮೇಲೆ ಇಡಿಸಿಕೊಳ್ಳದೆ ಹೋದರೆ ತಮ್ಮ ಪೂರ್ವಜರ ಪಾಪವು ತೊಳೆಯಲಾರದೆಂದು ಅವರ ನಂಬಿಕೆ. ಆದರೆ ಇದರಲ್ಲಿ ನಾಗನೂರಿನವರಿಗೊಂದು ಹೆಮ್ಮೆ! ಕೂಡಲದವರು ಹಿಂದಕ್ಕೆ ಪಾಪವನ್ನು ಮಾಡಿದ್ದಾರೆ, ಅದರ ಪ್ರಾಯಶ್ಚಿತ್ತಕ್ಕಾಗಿ ಆ ರೀತಿ ಗುರುಗಳ ಪಾದವನ್ನು ತಲೆಯ ಮೇಲೆ ಇಡಿಸಿಕೊಳ್ಳುತ್ತಾರೆ; ಆದರೆ ತಾವು ಪುಣ್ಯವಂತರಿದ್ದುದರಿಂದ ಅಂತಹ ಪ್ರಾಯಶ್ಚಿತ್ತವೇ ಬೇಡ ಎನ್ನುತ್ತಾರೆ ಅವರು. ಇದು ನಿಜವೇನೋ ಎನ್ನುವಂತಿದೆ. ಏಕೆಂದರೆ ಮೇಲಿಂದ ಮೇಲೆ ಕೂಡಲದಲ್ಲಿ ನದಿಯ ನೀರು ಹೊಕ್ಕು ಜನರ ವಿತ್ತಜೀವಿತಗಳಿಗೆ ಹಾನಿ ಮಾಡುತ್ತದೆ. ಬೆಳೆ ಹಾಳಾಗಿ ಬಡ ತನದಿಂದ ಬಳಲುತ್ತಾರೆ. ನಾಗನೂರಿನವರು ಮಾತ್ರ ಉತ್ತಮ ಬೆಳೆ ಬೆಳೆದು ಕೊಂಡು ಸಿರಿವಂತರಾಗಿದ್ದಾರೆ. ಕೂಡಲ ಹಾಗು ನಾಗನೂರು ಒಂದೇ ಪಾತಳಿ ಹಾಗು ದಂಡೆಯಿಂದ ಅಷ್ಟಷ್ಟೇ ಅಂತರದ ಮೇಲಿದ್ದರೂ ನೀರು ನಾಗ ನೂರಿನಲ್ಲಿ ಹೊಗದೆ ಕೇವಲ ಕೂಡಲದಲ್ಲಿ ಹೊಗುತ್ತದೆ.

ನಾಗನೂರಿನಲ್ಲಿ ನೀರು ಹೋಗದ್ದಕ್ಕೆ ಇನ್ನೊಂದು ಕಾರಣವೆಂದರೆ, ಆ ಗ್ರಾಮದ ನದೀ ದಂಡೆಗುಂಟ ಒಂದು ಶಿಲಾಮುಖವಿದೆ. ಅದರ ಭವ್ಯತೆಯ

ಕಲ್ಪನೆಯನ್ನು ನಾವು ತಂದುಕೊಳ್ಳಬೇಕಾದರೆ, ಇಜಿಪ್ತ ದೇಶವ ಸ್ತೂಪಗಳನ್ನು ನೆನೆಯಬೇಕು. ಆ ಮೂರ್ತಿಯ ಕಣ್ಣುರಂಧ್ರದಲ್ಲಿ ಒಂದು ಚಕ್ಕಡಿಯು ಆಯಾಸವಿಲ್ಲದಲೆ ಹೋಗುತ್ತದೆ. ಅದರ ಕಣ್ಣಿನ ಎವೆಯ ಮೇಲೆ ನಾಲ್ಕಾರು ಜನರು ಮಲಗಬಹುದು. ಕೂಡಲದಲ್ಲಿ ಜಾತ್ರೆ ನೆರೆದಾಗ ಅದನ್ನು ನೋಡಲು ನಾಗನೂರಿನ ಜನರೆಲ್ಲರೂ ಆ ಶಿಲಾಮುಖದ ತಲೆಯ ಮೇಲೆ ನಿಂತಿರುತ್ತಾರೆ. ಅದು ನಿಜವಾಗಿಯೂ ನಾಗನೂರಿನ ನದಿಗುಂಟ ಇರುವ ದಿನ್ನೆ. ಆದರೆ ಕೂಡಲ ದಿಂದ ನೋಡಿದರೆ ಅದು ಮುಖದಾಕಾರವಾಗಿ ಕಂಗೊಳಿಸುತ್ತದೆ. ಅಂತಲೇ ಆ ದಂಡೆಗೆ ಶಿಲಾಮುಖ ದಡವೆಂದೇ ಜನರು ನಾಮಕರಣ ಮಾಡಿದ್ದಾರೆ.

ಹೀಗಾಗಿ ನದಿಯ ನೀರು ನಾಗನೂರಿನಲ್ಲಿ ಬರುವದಿಲ್ಲ. ಪೂರ್ವದಲ್ಲಿ ನೀರು ಕೇವಲ ನಾಗನೂರಿನಲ್ಲಿ ಬರುತ್ತಿತ್ತಂತೆ. ಆದರೆ ಇಂದು ಅದರ ವಿರುದ್ಧ ವಾಗಿ ಕೂಡಲದಲ್ಲಿ ಹೋಗುತ್ತದೆ. ನಾಲ್ಕಾರು ವರುಷಗಳಲ್ಲಿ ಒಂದು ವರ್ಷ ಕೂಡಲಕ್ಕೆ ನೆರೆಹಾವಳಿ ತಪ್ಪುತ್ತದೆ. ಆ ವರುಷ ಅಲ್ಲಿ ಉತ್ತಮ ಬೆಳೆ ಬರು ತ್ತದೆ. ಒಂದು ವರುಷದ ಬೆಳೆ ನಾಲ್ಕಾರು ವರುಷಗಳ ಅನ್ನವಾಗುತ್ತದೆ. ಅಲ್ಲಿ ನೆರೆಹಾವಳಿಯು ತಪ್ಪಿದ ವರುಷ ನೀರು ಶಿಲಾಮುಖದ ಕಣ್ಣುಗಳಿಂದ ಹರಿದು ಮುಂದಕ್ಕೆ ನದಿಗೆ ಕೂಡುತ್ತದೆ. ಅಲ್ಲಿಯ ಬೆಳೆಗೆ ನಾಗನೂರಿನ ಪುಣ್ಯವೇ ಕಾರಣವೆಂದು ಹಳ್ಳಿಗರ ಹೇಳಿಕೆ. ಆ ಮುಖವೆಂದರೆ ಕೂಡಲದ ದಂಡೆಯ ಮೇಲೆ ಈಶ್ವರಲಿಂಗನನ್ನು ಸ್ಥಾಪಿಸಿದ ಸಂಗಪ್ಪನ ತಾಯಿಯಂತೆ. ತಾಯಿ ನಕ್ಕ ವರುಷ ಮಗನಿಗೆ ಊಟ. ಅವರ ಮಾತು ಸುಳ್ಳೆನಿಸಿದರೂ ಕೂಡಲದಲ್ಲಿ ನೆರೆ ಹಾವಳಿ ತಪ್ಪಿದ ವರುಷ ಅಲ್ಲಿ ನಿಂತು ಶಿಲಾಮುಖವನ್ನು ನೋಡಿದರೆ ಅದು ನೀರಿನಿಂದ ಸ್ವಚ್ಛವಾಗಿ ನಗುವಂತೆ ಕಾಣುತ್ತದೆ.

ಸಂಗಮದಿಂದ ಹರಿಯುವ ನೀರು ವಕ್ರವಾಗಿ ಕೂಡಲದ ಭೂಮಿಯನ್ನು ಸುತ್ತಿ ಹೋಗುತ್ತದೆ. ಈಶ್ವರನನ್ನು ಸ್ಥಾಪಿಸಿದ ಸಂಗನು ಹಿಂದಕ್ಕೆ ತನ್ನ ತಾಯಿಯನ್ನು ಕಡಿದು ಕತ್ತಿಯನ್ನು ಸಂಗಮದಲ್ಲಿ ತೊಳೆದನಂತೆ. ಅದಕ್ಕೆ ಸಂಗಮದ ವರೆಗೂ ನೀರು ನೀಲಿಯಾಗಿ ಕಂಡರೂ ಮುಂದೆ ನಸುಗೆಂಪು ಕಾಣು ತ್ತದೆ. ಸಂಗನು ತನ್ನ ಕತ್ತಿಯನ್ನು ತೊಳೆದದ್ದರಿಂದ ಸಂಗಮದಿಂದ ಮುಂದೆ ಅದಕ್ಕೆ ಕತ್ತೀಹೊಳೆಯೆಂದು ಕರೆಯುತ್ತಾರೆ. ಹಳ್ಳಿಗರ ಪ್ರತಿಮಾತೂ ಸತ್ಯ

ತೆಯ ಅನುಭವದಿಂದ ಬಂದಂತೆ ಕಾಣುತ್ತದೆ. ತಾಯಿ ನಾಗವ್ವನನ್ನು ಕೊಲ್ಲಲಿಕ್ಕೆ ಮಗನಾದ ಸಂಗನಿಗೆ ಕೂಡಲದ ಜನರು ಪ್ರೋತ್ಸಾಹಿಸಿದರಂತೆ; ಆ ತಾಯಿಯ ಶಾಪದಿಂದ ಆ ಜನರು ಪಾಪಿಷ್ಠರಾಗಿದ್ದಾರೆ. ನಾಗನೂರಿನವಳು ನಾಗವ್ವನಾಗಿದ್ದರಿಂದ ಅಲ್ಲಿಯವರು ಪುಣ್ಯವಂತರು. ಮಗನು ತಾಯಿಯ ತಲೆಯ ಮೇಲೆ ತನ್ನ ಕಾಲನ್ನಿಟ್ಟು ಎದೆಯಲ್ಲಿ ಕತ್ತಿಯನ್ನು ಚುಚ್ಚಿ ಅವಳನ್ನು ಕೊಂದನಂತೆ! ಆ ಅಪರಾಧದ ಪ್ರಾಯಶ್ಚಿತ್ತಕ್ಕೆ ಕೂಡಲದ ಜನರು ತಮ್ಮ ತಲೆಯ ಮೇಲೆ ಅಯ್ಯನವರ ಕಾಲನ್ನು ಇರಿಸಿಕೊಂಡು ಪಾಪವು ತೊಳೆಯಲೆಂದು ದೇವರನ್ನು ನೆನೆಯುತ್ತಾರೆ. ತಾಯಿ ನಾಗವ್ವನನ್ನು ಸಂಗನು ಕಡಿದುದಕ್ಕೆ ಕಥೆಯಿದೆ. ಆ ಶಿಲಾಮುಖಕ್ಕೆ ಒಂದು ಐತಿಹ್ಯವಿದೆ.

ಕೂಡಲಪ್ಪ ನಾಗನೂರಿನ ಗೌಡ, ಆಗರ್ಭ ಸಿರಿವಂತ. ಹೆಂಡತಿ ನಾಗವ್ವನ ಮೇಲೆ ತುಂಬಾ ವಿಶ್ವಾಸ. ಮದುವೆ ಮಾಡಿಕೊಂಡು ಬಂದ ದಿವಸವೇ ಅವಳಿಗೆ ಮನೆಯಲ್ಲಿಯ ಸಂಪತ್ತನ್ನೆಲ್ಲ ಒಪ್ಪಿಸಿ ಕೊಟ್ಟನು. ನಾಗವ್ವನ ಮಾತಿನಂತೆ ಗೌಡರು ಧನವನ್ನು ವೆಚ್ಚ ಮಾಡುತ್ತಿದ್ದರು ಮನೆ ತುಂಬಾ ಸಂಪತ್ತಿದ್ದರೂ ಒಂದೇ ಒಂದು ಚಿಂತೆ ಅವರನ್ನು ಕಾಡುತ್ತಿತ್ತು. ಅದು ವಂಶೋದ್ಧಾರಕನ ಚಿಂತೆ! ಅಪಾರ ಸಂಪತ್ತಿದ್ದರೂ ಕುಲೋದ್ಧಾರಕ ಮಗನಿಲ್ಲದಿದ್ದರೆ ಮನೆಯೆಲ್ಲವೂ ಬರಿದೆಂದು ಕೂಡಲಪ್ಪನ ಕೊರಗು. ಸದಾವಕಾಲವೂ ನಾಗವ್ವನೆದುರು ಈ ಮಾತನ್ನಾಡಿ ನಿಟ್ಟುಸಿರು ಬಿಡುತ್ತಿದ್ದನು. ಅಂತಹ ಭಾಗ್ಯವು ತನ್ನ ಜೀವನದಲ್ಲಿ ಬರೆದಿಲ್ಲವೆಂದು ಭಾವಿಸಿ ಮೌನ ತಾಳುತ್ತಿದ್ದನು. ನಾಗವ್ವನ ಹಣೆಯಲ್ಲಿ ಅದು ಬರೆಯದೆ ಹೋದರೂ ಬೇರೆ ಮದುವೆಯಿಂದ ಕೂಡಲಪ್ಪನಿಗೆ ಆ ಭಾಗ್ಯವು ದೊರೆಯಬಹುದೆಂದು ಯಾರೋ ಹೇಳಿದರು. ನಾಗವ್ವನು ಅದಕ್ಕೆ ಒಪ್ಪಿಗೆಯನ್ನಿತ್ತರೆ ತಾನು ಮದುವೆಗೆ ಸಿದ್ಧನೆಂದು ಹೇಳಿದನು. ನಾಗವ್ವನೆದುರು ಒಮ್ಮೆ ತಾನೇ ಈ ಮಾತನ್ನು ಆಡಿ ನೋಡಿದನು. ನಾಗವ್ವನು ಇದಕ್ಕೆ ಒಪ್ಪಲಿಲ್ಲ. ಎಷ್ಟಾದರೂ ಸವತಿಯನ್ನು ಬರಗೊಡಲಿಕ್ಕೆ ಸ್ತ್ರೀಯರು ಸಹಸಾ ಒಪ್ಪಿಗೆಯನ್ನೀಯುವದಿಲ್ಲ. ಸವತಿ ಬಂದರೆ ಅವಳು ಕೂಡಲಪ್ಪನ ಪಟ್ಟದ ರಾಣಿಯಾಗಿ ತನ್ನನ್ನು ಮನೆಯಲ್ಲಿ ಯಾರೂ ಕೇಳಲಿಕ್ಕಿಲ್ಲವೆಂದು ವಿಚಾರಿಸಿ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದಳು. ಆದರೆ ಗಂಡನ ಮುಖವನ್ನು ನೋಡಿ ಕನಿಕರವೆನಿಸಿತು. ಮಗನ ಹಂಬಲಕ್ಕಾಗಿಯೇ ಕೂಡಲಪ್ಪನು

ಇದುವರೆಗೆ ಬಾಳಿದನೆಂದರೂ ಅಡ್ಡಿಯಿಲ್ಲ. ನಾಗವ್ವನು ಬೇರೊಂದು ಮದುವೆಯನ್ನು ತನ್ನ ಕುಹಕ ವಿಚಾರದಿಂದ ತಪ್ಪಿಸಲು ಪ್ರಯತ್ನಿಸಿದಳು. "ನನಗೆ ಈಗೇನು ಅಂತಹ ವಯಸ್ಸಾಗಿದೆ? ಲಗ್ನವಾಗಿ ಇಪ್ಪತ್ತು ವರುಷಗಳು ದಾಟಿದರೇನಾಯಿತು? ಇನ್ನೆರಡು ವರುಷ ನೋಡಿ ಬೇರೆ ಮದುವೆ ಮಾಡಿಕೊಳ್ಳಿರಿ" ಎಂದು ಹೇಳಿದಳು. ಗೌಡರಿಗೆ ನಾಗವ್ವನ ಸೂಚನೆಯಿಂದ ಮಳಲಿನಲ್ಲಿ ನೀರನ್ನು ಕಂಡಂತಾಯಿತು. ತನ್ನ ಮಾತು ಗೆದ್ದುದಕ್ಕೆ ನಾಗವ್ವನಿಗೆ ಸಂತೋಷವೆನಿಸಿತು. ಆದರೆ "ಭಾಗ್ಯಶ್ರೀ"ಯೊಬ್ಬನು ಹುಟ್ಟದೆ ಹೋದರೆ ಮತ್ತೆ ಈ ಪ್ರಶ್ನೆ ಏಳಬಹುದೆಂದು ಆಕೆ ಚಿಂತೆಗೊಳಗಾದಳು. ಅದನ್ನು ತಪ್ಪಿಸಲು ತಾನು ಅಡ್ಡ ಮಾರ್ಗ ಹಿಡಿಯಲು ನಿಶ್ಚಯಿಸಿದಳು.

ವರುಷ ಒಂದು ಕಳೆದರೂ ನಾಗವ್ವನಲ್ಲಿ ಬಸುರಿನ ಯಾವ ಚಿಹ್ನವೂ ಕಂಡುಬರಲಿಲ್ಲ. ತನ್ನ ಹಣೆಯಲ್ಲಿಯೇ ಅದು ಬರೆದಿಲ್ಲವೆಂದು ಗೌಡನು ನಾಗವ್ವನ ಸಂಪರ್ಕವನ್ನೇ ಬಿಟ್ಟುಬಿಟ್ಟನು. ಕೇವಲ ಎರಡು ಹೊತ್ತು ಊಟಕ್ಕೆ ಮನೆಗೆ ಬರುತ್ತಿದ್ದನು ವರುಷದ ಮೇಲೆ ಮತ್ತೊಂದು ವರುಷ ಜಾರಿತು. ಆ ವರುಷ ಅತಿವೃಷ್ಟಿಯಿಂದ ವರದೆಯು ನಾಗನೂರಲ್ಲಿ ಹೊಕ್ಕು ಬಹು ಜನರ ಆಹುತಿಯನ್ನು ತೆಗೆದುಕೊಂಡಳು. ಆ ಊರಿನ ಇತಿಹಾಸದಲ್ಲಿಯೇ ವರದೆ ಒಳಹೊಕ್ಕುದು ಮೊದಲು. ಬಹುಶಃ ಅದೇ ಕೊನೆಯದಾಗಿರಬಹುದು. ಅನೇಕರು ನಿರಾಶ್ರಿತರಾದರು. ನದಿಯ ದಂಡೆಯೆಲ್ಲಾ ಕೊಚ್ಚಿ ಹೋಯಿತು. ಊರಿನವರ ಅನ್ಯಾಯದಿಂದಲೇ ಈ ರೀತಿ ಸಂಭವಿಸಿದೆಯೆಂದು ಹಿರಿಯರು ತರ್ಕಿಸಿದರು. ನಾಗವ್ವನು ಆಗಲೇ ತನ್ನ ದುರ್ಮಾರ್ಗದಲ್ಲಿ ಕಾಲಿಕ್ಕಿದ್ದಳು. ನಾಗನೂರಿನವರು ಒಂದು ಒಡ್ಡನ್ನು ಕಟ್ಟಲು ಯೋಚಿಸಿದರು. ಅದನ್ನು ಹಾಗೆಯೇ ಬಿಟ್ಟರೆ ವರದೆಯು ತನ್ನ ನಾಲಿಗೆಯಿಂದ ಇಡೀ ನಾಗನೂರನ್ನೇ ನೆಕ್ಕಬಹುದೆಂದು ಅಂಜಿದರು. ಕೂಡಲಪ್ಪನು ತನ್ನ ಸಂಪತ್ತನ್ನೆಲ್ಲಾ ಅದಕ್ಕಾಗಿ ವ್ಯಯಿಸಲು ಮುಂದೆ ಬಂದನು. ಆದರೆ ಆತನು ಗಳಿಸಿದ ಹಣವೆಲ್ಲವೂ ನ್ಯಾಯಮಾರ್ಗದಿಂದ ಬಂದುದಲ್ಲಾದ್ದರಿಂದ ಕಟ್ಟುವ ಒಡ್ಡು ಬಹು ದಿವಸ ನಿಲ್ಲಲಿಕ್ಕಿಲ್ಲವೆಂದು ಜನರು ನಿರಾಕರಿಸಿದರು. ಮಕ್ಕಳಿಗಾಗಿ ಮಾಡಿಟ್ಟ ಹಣವೆಲ್ಲವೂ ಮಕ್ಕಳಿಲ್ಲದ್ದಕ್ಕೆ ಪುಣ್ಯದ ಕಾರ್ಯಕ್ಕೆ ವಿನಿಯೋಗವಾಗಲೆಂದು

ಬಗೆದರೆ ತೆಗೆದುಕೊಳ್ಳಲಿಕ್ಕೆ ಯಾರೂ ಸಿದ್ಧರಾಗದ್ದಕ್ಕೆ ಅವನು ಮತ್ತಿಷ್ಟು ಜೀವನದಲ್ಲಿ ನಿರಾಶನಾದನು.

ಇಷ್ಟರಲ್ಲಿಯೇ ನಾಗವ್ವ ಬಸಿರೆಂಬ ವಾರ್ತೆ ಕಿವಿಗೆ ಬಡಿಯಿತು. ತಾನು ಆವಳ ಸಂಪರ್ಕ ಬಿಟ್ಟು ನಾಲ್ಕು ವರುಷಗಳಾಗಿರುವಾಗ ಈ ಸುದ್ದಿಯಿಂದ ಅವನು ನೊಂದುಕೊಂಡನು. ತಾನು ಬಸಿರೆಂಬ ವಾರ್ತೆಯನ್ನು ಕೇಳಿ ಗಂಡನು ಸಂತೋಷಪಡಬಹುದೆಂದು ಕನಸು ಕಂಡ ನಾಗವ್ವನ ಗೋಪುರವು ಕಳಚಿ ಬಿದ್ದಿತು. ಕೂಡಲಪ್ಪನ ಹೃದಯವೇ ಒಡೆದು ಚೂರಾಯಿತು. ಕಾಲು ಜಾರಿದ ಮೇಲೆ ಮಾಡುವದೇನು ? ತಾನೇ ಅದಕ್ಕೆ ಹೆಚ್ಚು ಪುಟ ಕೊಟ್ಟರೆ ತಾನಿರುವಾಗಲೇ ತನ್ನ ಮನೆತನದ ಗೌರವವು ಮಾರಿ ಹೋಗುವದೆಂದು ತಿಳಿದು ಸುಮ್ಮನಾಗಿ ಬಿಟ್ಟನು. ತಾನೆ ಈ ಭೂಮಿಯನ್ನು ಬಿಟ್ಟು ಪರಶಿವನನ್ನು ಸೇರಬೇಕೆಂದು ನಿರ್ಧರಿಸಿದನು. ನಾಗವ್ವನು ತವರಿನಲ್ಲಿ ಗಂಡು ಮಗುವನ್ನು ಹೆತ್ತ ಹತ್ತನೇ ದಿವಸ ಕೂಡಲಪ್ಪನ ಕೊನೆಯ ಯಾತ್ರೆಯು ಜರುಗಿತು.

ತವರಿನ ಆಳು ಗಂಡು ಮಗುವನ್ನು ಹೆತ್ತಿರುವಳೆಂಬ ವಾರ್ತೆಯನ್ನು ತಂದ ದಿವಸ ಅವನನ್ನು ಅಲ್ಲಿಯೇ ಒಂದು ದಿವಸ ನಿಲ್ಲಿಸಿಕೊಂಡು ಅವನ ಕಡೆ ಒಂದು ಬಂಗಾರದ ಉಡುದಾರವನ್ನು ಕೊಟ್ಟು ' ನಾಗವ್ವನ ಮಗನಿಗೆ ಇದನ್ನು ಹಾಕಬೇಕು ' ಎಂದು ಹೇಳಿದನು. ಆಳಿಗೂ ಈ ಶಬ್ದವನ್ನು ಕೇಳಿ ಆಶ್ಚರ್ಯವೆನಿಸಿತು. ನಾಗವ್ವನಿಗೆ ತಾನು ಕಾಲು ಜಾರಿ ತನ್ನ ಗಂಡನನ್ನು ಕಳೆದುಕೊಂಡೆನೆಂದು ವಿಷಾದವೆನಿಸಿತು. ಮೂರು ತಿಂಗಳ ಕೂಸಾದ ಸಂಗಪ್ಪನನ್ನು ಕರಕೊಂಡು ಮತ್ತೆ ನಾಗನೂರಿಗೆ ಬಂದಳು. ಈಗ ಅವಳೇ ಗೌಡತಿ. ಊರಿನ ಮಹಾ ತಾಯಿ ! ಅಪಾರ ಸಂಪತ್ತಿನ ಅಧಿದೇವತೆ !! ಕೆಲ ದಿನಗಳಲ್ಲಿ ಕೂಡಲಪ್ಪನ ಸ್ಮೃತಿ ಅಳಿಸಿ ಹೋಯಿತು. ಸುಖವಾಗಿ ಸಂಸಾರ ಸಾಗಿತು. ವರುಷಗಳ ಮೇಲೆ ವರುಷಗಳು ಉರುಳಿದವು. ಸಂಗಪ್ಪ ಈಗ ಬೆಳೆದು ದೊಡ್ಡವನಾಗಿದ್ದಾನೆ. ಗೌಡಕಿಯ ಸೂತ್ರವನ್ನು ತಾನೇ ವಹಿಸಿಕೊಂಡಿದ್ದಾನೆ. ಅದುವರೆಗೂ ತಂದೆ ಮಾಡಿಸಿ ಕಳಿಸಿದ್ದ ಬಂಗಾರ ಉಡುದಾರ ಹಾಕುತ್ತ ಬಂದಿದ್ದನು. ದೊಡ್ಡವನಾಗಿದ್ದರಿಂದ ಅದನ್ನು ತೆಗೆದಿಡಬೇಕೆಂದು ತೆಗೆದನು. ತಾನು ಹತ್ತು ದಿವಸದವನಿರುವಾಗ ತನ್ನ ತಂದೆ ಅದನ್ನು ಮಾಡಿಸಿ ಕಳಿಸಿದ್ದನೆಂದು

ತಾಯಿಯ ಬಾಯಿಂದ ಆವನಿಗೆ ತಿಳಿದಿತ್ತು. ಸುಮ್ಮನೆ ಅದನ್ನು ಬೆರಳಿನಿಂದ ತಿರುಗಿಸುತ್ತಿರುವಾಗ ಅದರ ಮೇಲೆ ಕೊರೆದ ಚಿಕ್ಕ ಚಿತ್ರ ಒಂದು ಕಂಡಿತು. ಅದನ್ನು ನೋಡಲು ಅದರ ಮೇಲೆ ಒಂದು ಕತ್ತಿ ಹಾಗೂ ಹೆಣ್ಣುಮುಖದ ಚಿತ್ರಗಳೆರಡಿದ್ದವು. ಅಂತಹ ಶುಭ ಸಮಾರಂಭಕ್ಕೆ ಇಂತಹ ಅಶುಭಸೂಚಕ ಚಿತ್ರವನ್ನೇಕೆ ಕೊರಿಸಿ ಕಳಿಸಿದನೆಂದು ದಿಗಿಲುಗೊಂಡನು.

ಒಂದು ದಿನ ತನ್ನ ತಂದೆಯ ಕಾಗದಪತ್ರಗಳನ್ನು ತಿರುವಿ ಹಾಕುವಾಗ ಉಡಿದಾರದ ಮೇಲೆ ಕೊರೆದ ಚಿತ್ರವೇ ಒಂದು ಕಾಗದದಲ್ಲಿ ಬರೆದಿತ್ತು. ಅದ ರೊಳಗಿನ ಅಕ್ಷರಗಳೆಲ್ಲವೂ ಅಳಿಕಿಸಿ ಹೋಗಿತ್ತು. ಅದು ಯಾರಿಗೋ ಬರೆದ ಪತ್ರವಿತ್ತು. ಅದನ್ನು ಬಹು ಪ್ರಯತ್ನಪಟ್ಟು ಓದಿದನು. ಅದರಲ್ಲಿ ಏನೂ ತಿಳಿಯದೆ ಹೋದರೂ "ಹೆಂಡತಿ ಜಾರೆಯಾಗಿ ಮಗನನ್ನು ಹೆತ್ತುದಕ್ಕೆ ಅವ ಳನ್ನು ಕತ್ತಿಯಿಂದ ಇರಿಯಬೇಕೆಂಬುವಷ್ಟು ಕೋಪ ಬಂದಿದೆ. ಸಾಧ್ಯವಾಗ ದ್ದಕ್ಕೆ ಈ ಚಿತ್ರದಲ್ಲಿ ಅದನ್ನು ಮಾಡಿ ಅವಳಿಗೆ ಕಳಿಸಿದ್ದೇನೆ" ಎಂದಿಷ್ಟು ತಿಳಿ ಯಿತು. ಅಂದು ಅವನಿಗೆ ತಾನು ಕೂಡಲಪ್ಪನ ಮಗನಲ್ಲವೆಂದು ಖಂಡಿತ ವೆನಿಸಿತು. ಊರಿನವರೆಲ್ಲರೂ "ಸಂಗಪ್ಪನವರೇ, ಗೌಡರ ರಕ್ತವು ನಿಮಗೆ ಎಲ್ಲಿಂದ ಬರಬೇಕು !" ಎಂದು ಅನ್ನುತ್ತಿದ್ದರು. ಜನರು ಕೇವಲ ಹಾಸ್ಯಮಾಡು ತ್ತಿರಬಹುದೆಂದು ಅದುವರೆಗೂ ಅವನ ಕಲ್ಪನೆಯಾಗಿತ್ತು. ಈಗ ಅವನ ಸಂಶಯಪಿಶಾಚಿಯು ಬೆಳೆಯಹತ್ತಿತು. ಜಾರೆಯ ಮಗನಾಗಿ ಇರುವದಕ್ಕಿಂತ ಸಾಯುವದೇ ಲೇಸೆಂದು ಭಾವಿಸಿದನು. ತಾಯಿಯ ಅಕಾರ್ಯಕ್ಕಾಗಿ ತಪ್ತ ನಾದನು. ಕೂಡಲಪ್ಪನ ಕಾರ್ಯವನ್ನು ಪೂರ್ತಿಗೊಳಿಸಲು ತಾನು ಸಿದ್ಧನಾ ದನು. ನಾಗನೂರಿನ ಒಬ್ಬಿಬ್ಬರು ಹಿರಿಯರನ್ನು ಕೇಳಿ ಅದನ್ನು ದೃಢಪಡಿಸಿ ಕೊಂಡನು, ತಾಯಿಯ ಕೂಡ ಈ ಮಾತನ್ನೆತ್ತಿದಾಗ ಅವಳಿಗೆ ಒಮ್ಮೆಲೆ ಸಂಕಟವಾಯಿತು. ಯಾರೋ ನೀಚರು ಈ ಸುದ್ದಿಯನ್ನು ಹೇಳಿರಬೇಕೆಂದು ನಿರ್ಣಯಿಸಿದಳು. ಕೂಡಲಕ್ಕೆ ಮಗನು ಮೇಲಿಂದ ಮೇಲೆ ಹೋಗುತ್ತಿದ್ದುದ ರಿಂದ ಅವರನ್ನು ಶಪಿಸಿದಳು. ಆದರೆ ಮಗನೆದುರು ಮಾತನಾಡುವದೇನು ? ತನ್ನ ತಪ್ಪನ್ನು ಆರೆಆರೆಯಾಗಿ ಒಪ್ಪಿಕೊಂಡಳು. ಗೌಡರ ಮನೆಯ ದೀಪವು ನಿಲ್ಲಬೇಕೆಂದು ತಾನು ಈ ರೀತಿ ಮಾಡಿದಳೆ ವಿನಾ ಬೇರೆ ಯಾವ ಉದ್ದೇಶದಿಂ ದಲ್ಲವೆಂದು ಹೇಳಿದಳು. ನಿಜವಾಗಿಯೂ ಗಂಡನ ಮರಣದ ನಂತರ ಧರ್ಮ

ಮಾರ್ಗದಲ್ಲಿ ಕಾಲ ಕಳೆಯುತ್ತಿದ್ದಳು. ವರದೆಯ ದಂಡಿಗೆ ಒಡ್ಡು ಹಾಕಿಸಲು ತನ್ನ ಸಂಪತ್ತನ್ನು ವ್ಯಯಿಸಬೇಕೆಂದು ನಿರ್ಧರಿಸಿದ್ದಳು. ಆದರೆ ಇಲ್ಲಿ ಬೇರೆ ದೈವವು ಕಾದಿತ್ತು !

ಸಂಗಪ್ಪನು ತಾಯಿಯು ಒಪ್ಪಿಕೊಂಡ ಮೇಲೆ ತಾನು ಅಪವಿತ್ರನೆಂದು ತಿಳಿದನು. ಕೋಪದಿಂದ ಕಿಡಿಕಿಡಿಯಾಗಿ ತಂದೆಯ ಕೊನೆಯಾಸೆಯನ್ನು ಪೂರ್ತಿಗೊಳಿಸಲು ಸಿದ್ಧನಾದನು. ಸಂಕ್ರಮಣದ ಕರಿಯ ದಿವಸ ನಾಗನೂರಿ ಲ್ಲವೂ ನಿದ್ರಿಸುತ್ತಿರುವಾಗ, ಮಧ್ಯರಾತ್ರಿ ಅವಳನ್ನು ಎಳೆದು ತಂದು ನದಿಯ ಪಾತ್ರದ ಮಳಲಿನಲ್ಲಿ ಹಾಕಿದನು. ತಾಯಿಯ ತಲೆಯ ಮೇಲೆ ಕಾಲನ್ನಿಟ್ಟು ಎದೆಯಲ್ಲಿ ಕತ್ತಿಯನ್ನು ತಿವಿದನು. ರಕ್ತವು ಚಿಮ್ಮಹತ್ತಲು ತಾಯಿ ಒರಲಿ ದಳು, ಕೂಗಿದಳು, ಚೀರಿದಳು. ಆದರೆ ಏನಿದೆ? ಜೀವನದ ಯಾತ್ರೆ ಕೊನೆಗೊಂಡಿತ್ತು. ಸಂಗಪ್ಪನು ತನ್ನ ಮಾತನ್ನು ಕೇಳಿದ ಮೇಲೆ ಸುಮ್ಮನಿ ದ್ದುದರಿಂದ ಗಂಡ ಕೂಡಲಪ್ಪನಂತೆ ಮರೆಯುವನೆಂದು ಅನಿಸಿತ್ತು. ಹೀಗೆ ಕ್ರೂರವಾಗಿ ಬಲಿ ಕೊಡಬಹುದೆಂಬುದರ ಕಲ್ಪನೆಯು ಇದ್ದಿದ್ದಿಲ್ಲ. ಸಂಗಪ್ಪನು ರಕ್ತದಿಂದ ತೊಯ್ದ ಕತ್ತಿಯನ್ನು ಸಂಗಮದಲ್ಲಿ ತೊಳೆದು ಮೇಲಕ್ಕೆ ಬಂದನು. ಮತ್ತೊಮ್ಮೆ ತಾಯಿಯ ಶವವನ್ನು ದೃಷ್ಟಿಸಿ ನೋಡಿ ನದಿಯಲ್ಲಿ ಅದನ್ನು ಬೀಸಿ ಒಗೆದನು. ವರದೆಯು ತನ್ನ ಮಡಲಿನಲ್ಲಿ ನಾಗವ್ವನನ್ನು ಕರೆದುಕೊಂಡು ಕೂಡಲಪ್ಪನ ಬಳಿ ಕಳಿಸಿದಳು. ಇಷ್ಟರಲ್ಲಿ ನದಿಯ ಆ ದಂಡೆಯಿಂದ ನಗು ವೊಂದು ಕೇಳಿಬಂದಿತು. ಅತ್ತಕಡೆ ತಿರುಗಲು ಇನ್ನೊಂದು ಕಡೆ ಮಿಂಚಿತು. ಬೇರೊಂದು ಕಡೆ ಧ್ವನಿಯೊಂದು ಚೀರಿತು; ಪ್ರಕೃತಿಯೇ ಹುಚ್ಚೆದ್ದು ಕುಣಿ ದಂತೆ ಕಂಡಿತು. ಸಂಗಪ್ಪನು ಚಣಹೊತ್ತು ಕಣ್ಣುಮುಚ್ಚಿ ತೆರೆಯುವಷ್ಟ ರಲ್ಲಿಯೇ ಭೂತಾಕಾರದ ವ್ಯಕ್ತಿಯೊಂದು ಇವನೆದುರು ನಿಂತಿತು; ಮಾತನಾ ಡಲು ಪ್ರಾರಂಭಿಸಿತು:

"ನಾನು ನಿನ್ನ ತಾಯಿಯ ಭೂತ. ತಾಯಿಯ ಪಾಪಕ್ಕೆ ಅವಳನ್ನು ಇರಿದು ಕೊಂದೆ. ಪಾಪದ ಕೊನೆಯಾಯಿತೆಂದು ಭಾವಿಸಿದೆಯಾ? ಸುಳ್ಳು. ಮತ್ತೆ ಪಾಪದಾಟವು ಪ್ರಾರಂಭವಾಯಿತು! ಹತ್ತು ತಿಂಗಳು ಹೊತ್ತು, ಸಾಕಿ ಸಲಹಿ ಬೆಳೆಯಿಸಿದ ಹೃದಯಕ್ಕೆ ನೀನಿತ್ತುದು ಮುದ್ದಿನ ಮುತ್ತಲ್ಲ; ಕತ್ತಿಯ

ತಿವಿತ! ಬೆಂದ ತಾಯಿಯ ಹೃದಯದ ಶಾಪವನ್ನು ಅನುಭೋಗಿಸಬೇಕು. ಮಗನಿತ್ತ ಕಷ್ಟಕ್ಕೆ ತಾಯಿಯ ಕಣ್ಣಿನಿಂದ ಉದುರುವ ಪ್ರತಿ ಹನಿ ಕಣ್ಣೀರೆಂದರೆ ಮಗನಿಗೆ ನರಕದಲ್ಲಿ ಕೊಳೆಯುವ ಒಂದೊಂದು ದಿನ ಇದ್ದಂತೆ. ನನ್ನ ಪಾಪಕ್ಕಾಗಿ ಹಾದಿ ಬಿಟ್ಟೆ. ಅದಕ್ಕಾಗಿ ಗಂಡನನ್ನು ಕಳಕೊಂಡೆ. ನಿನಗಾಗಿ ನಾನು ಇದುವರೆಗೂ ಬಾಳಿದ್ದಕ್ಕೆ ಸಿಕ್ಕ ಪ್ರತಿಫಲವೇನು ? ರಕ್ತಾಭಿಷೇಕದ ಸಂಭ್ರಮವಲ್ಲವೆ ?"

ವ್ಯಕ್ತಿ ಗಹಿಗಹಿಸಿ ನಕ್ಕಿತು. ಮೂರ್ತಿ ಬೆಳದಿಂಗಳಲ್ಲಿ ಮರೆಯಾಯಿತು. ಸಂಗಪ್ಪನಿಗೆ ದೇಹದ ಮೇಲೆ ಪರಿವೆಯಿದ್ದಿಲ್ಲ. ರಾಕ್ಷಸೀವೃತ್ತಿಯು ಅವನಲ್ಲಿ ತುಂಬಿದ್ದರಿಂದ ಅವನಿಗೆ ನಿಶೆಯ ಅಂಜಿಕೆಯೇ ಇದ್ದಿದ್ದಿಲ್ಲ. ಹಾಗೆಯೇ ಹೊರಳಿ ನಾಗನೂರನ್ನು ನೋಡದೆ ಕೂಡಲಕ್ಕೆ ಬಂದುಬಿಟ್ಟನು. ನಾಗನೂರಲ್ಲಿ ಅಪಾರ ಸಂಪತ್ತಿದೆ, ಮನೆಯಿದೆ, ಆಸ್ತಿಯಿದೆ. ಆದರೆ ಅಲ್ಲಿಗೆ ಹೋಗಲಿಕ್ಕೆ ಅವನ ಮನಸ್ಸಾಗಲಿಲ್ಲ ಅವನಿಗೆ ಏನೂ ಬೇಕಿರಲಿಲ್ಲ. ಬೇಕಾದುದು ಒಂದೇ ಒಂದು. ಅದು ತನ್ನ ಪಾಪದ ಕೊಳೆಯನ್ನು ತೊಳೆವ ಮಾರ್ಗ.

ಮರುದಿವಸ ನಾಗನೂರಿನವರು ಬಂದು ತಮ್ಮೂರಿಗೆ ಮರಳಿ ಬರಬೇಕೆಂದು ಬೇಡಿಕೊಂಡರು. ಆ ಅಪವಿತ್ರ ಊರಲ್ಲಿ ಕಾಲಿಡಬೇಡವೆಂದು ಕೂಡಲದ ಜನರು ಸಂಗಪ್ಪನಿಗೆ ಪ್ರೋತ್ಸಾಹಿಸಿದರು. ತನ್ನ ಆಸ್ತಿಯನ್ನು ಬೇಕಾದವರು ಬೇಕಾದಂತೆ ಉಪಯೋಗಿಸಬೇಕೆಂದು ಹೇಳಿದನು. ಪಂಚರು ಸೇರಿ ಅದರಿಂದ ವರದಾ ನದಿಗೆ ಒಡ್ಡನ್ನು ಕಟ್ಟಬೇಕೆಂದು ನಿರ್ಣಯಿಸಿದರು. ಇತ್ತ ಸಂಗಪ್ಪನು ಕೂಡಲದ ನಡುದಂಡೆಗೆ ಈಶ್ವರ ಲಿಂಗವನ್ನು ಸ್ಥಾಪಿಸಿ ಅದರ ಪೂಜೆಯಲ್ಲಿ ಕಾಲ ಕಳೆಯಹತ್ತಿದನು.

ಒಡ್ಡು ಕಟ್ಟುವ ಕಾರ್ಯ ಪ್ರಾರಂಭವಾಯಿತು. ಅರ್ಧ ಒಡ್ಡು ಮುಗಿಯುತ್ತ ಬಂದಿತ್ತು. ರಾತ್ರಿಯಲ್ಲಿ ಒಂದು ದಿವಸ ವರದೆಯು ಕೊಚ್ಚಿಕೊಂಡು ಹೋದಳು. ಮತ್ತೆ ಕಟ್ಟಿದರು. ಮತ್ತೆ ವರದೆಯು ನುಂಗಿದಳು. ಸಂಗಪ್ಪನ ಸಂಪತ್ತೆಲ್ಲವೂ ತೀರಿದರೂ ಆ ಒಡ್ಡು ಅರ್ಧಕ್ಕೇನೇ ನಿಂತಿತು. ಮುಂದೆ ಅದನ್ನು ಕಟ್ಟಿದ ರಾತ್ರಿಯೇ ನೀರು ಅದನ್ನು ಸವರಿಕೊಂಡು ಹೋಗುತ್ತಿತ್ತು. ಸಂಗಪ್ಪನಿಗೆ ಈ ವಿಷಯವನ್ನು ತಿಳಿಸಿದರು. ಅವನಿಗೂ ಅದು ತಿಳಿಯದಾ

ಯಿತು. ಒಂದು ದಿನ ರಾತ್ರಿ ಈಶ್ವರ ಗುಡಿಯಲ್ಲಿ ಕುಳಿತು ತಾಯಿಯನ್ನು ನೆನೆದನು. ಒಂದು ಭೂತಾಕಾರದ ಬೆಳಕೊಂದು ಸಂಗಪ್ಪನ ಮುಂದೆ ನಿಂತಿತು.

"ನನ್ನ ಕೋಪಕ್ಕಾಗಿ ಒಡ್ಡು ನಿಲ್ಲದಾಗಿದೆ. ನೀವು ಮಾನವರು. ನಾವು ಅಸುರರು. ನೀವು ವರ್ಷಗಟ್ಟಲೆ ಮಾಡಿದ್ದನ್ನು ನಾವು ನಿಮಿಷಾರ್ಧ ದಲ್ಲಿ ವಿರೂಪಗೊಳಿಸಬಲ್ಲೆವು. ನಾನು ಮನಸ್ಸು ಮಾಡಿದರೆ ಇದು ನಿಲ್ಲುವದು ಒಂದು ಚಣದ ಮಾತು." ಧ್ವನಿ ಹೇಳಿತು.

"ನೀನೇಕೆ ಮನಸ್ಸನ್ನು ಮಾಡುವದಿಲ್ಲ ?" ಸಂಗಪ್ಪನು ಪ್ರಶ್ನಿಸಿದನು.

"ನಿನ್ನ ಮೇಲಿನ ಸಿಟ್ಟಿಗಾಗಿ." ತಾಯಿ ಹೇಳಿದಳು.

"ನನ್ನ ಮೇಲಿನ ಕೋಪಕ್ಕಾಗಿ ಊರಿನವರಿಗೆ ಅನ್ಯಾಯವನ್ನು ಮಾಡು ವದೇಕೆ ? ತಪ್ಪು ನನ್ನದಿದ್ದುದರಿಂದ ನನ್ನನ್ನು ಶಿಕ್ಷಿಸು." ಅವನು ಹೇಳಿದನು.

"ಸರಿ. ನೀನಂದಂತೆ ಆಗಲಿ."

ಮುಂದೆ ಕೆಲ ದಿನಗಳಲ್ಲಿಯೇ ಭೂಮಿ ಕಂಪಿಸಿದಂತಾಯಿತಂತೆ. ವರ ದೆಯ ನೀರೆಲ್ಲವೂ ಚಲ್ಲಾಪಿಲ್ಲಿಯಾಗಿ ಕೂಡಲವನ್ನು ಹೊಕ್ಕಿತು. ಸಂಗಪ್ಪನಿದ್ದ ಮನೆಯನ್ನು ಕೊಚ್ಚಿಕೊಂಡು ಹೋಯಿತು. ಮರುದಿವಸ ನಾಗನೂರಿನ ನದಿಯ ದಂಡೆಯ ಮೇಲೆ ಆ ಒಡ್ಡಿನಲ್ಲಿ ಕಲ್ಲು-ಮಣ್ಣುಗಳು ಒಂದು ಬಿದ್ದವು. ಅಲ್ಲಿ ಹೊಸ ಸೃಷ್ಟಿಯೇ ಉದ್ಭವಿಸಿದಂತೆ ಕಂಡಿತು. ಅದು ಭೂಕಂಪನದ ಕಾರಣವೆಂದು ಕೆಲವರೆಂದರು. ಕೂಡಲದ ದಂಡೆಯಿಂದ ನೋಡಿದವರು ಅದೊಂದು ಸ್ತ್ರೀಯಳ ಮುಖವೆಂದು ಒದರಿದರು. ಒಡ್ಡು ಹೋಗಿ ಒಂದು ಕಲ್ಲಿನ ಮುಖವಾಗಿ ಕಂಡಿದ್ದಕ್ಕೆ ಬೇರೆ ಕೆಲವರು ಬೇರೆ ಬಗೆಯಾಗಿ ತರ್ಕಿಸಿ ದರು. ಅದು ನಾಗವ್ವನ ಮುಖವಂತೆ. ಒಡ್ಡು ನಿಲ್ಲದ್ದಕ್ಕೆ ತಾನೇ ಬಂದು ಅದರ ಮೇಲೆ ಕುಳಿತಿದ್ದಾಳಂತೆ. ಅಂದಿನಿಂದ ವರದೆಗೆ ನಾಗನೂರಿನ ಒಳಕ್ಕೆ ಹೋಗಲಿಕ್ಕೆ ಅಂಜಿಕೆಯಾಗಿದೆ, ಉಗ್ರ ಮೂರ್ತಿಯನ್ನು ನೋಡಿ. ಅವಳು ಕೂಡಲದಲ್ಲಿ ಮೇಲಿಂದ ಮೇಲೆ ನುಗ್ಗುತ್ತಾಳೆ. ನಾಗವ್ವನ ಸೇಡನ್ನು ತೀರಿಸಿ ಕೊಳ್ಳಲು ತಾನೂ ಸಹಾಯ ಮಾಡುತ್ತಾಳೆ.

ಅಂತಲೇ ಇಂದಿಗೂ ಅಲ್ಲಿ ಶಿಲಾಮುಖವು ನಿಂತಿದೆ. ನೀರಿನ ಹಾವಳಿಗೆ ಇಂದಿಗೂ ಕೇವಲ ಕೂಡಲವೇ ಸಿಗುತ್ತದೆಯೇ ವಿನಾ ನಾಗನೂರು ಸಿಗದಾಗಿದೆ. ಇಂದಿನ ಆ ಎರಡೂ ಗ್ರಾಮಗಳ ಮಧ್ಯೆ ತಲೆಯೆತ್ತಿ ನಿಂತ ದ್ವೇಷಕ್ಕೆ ಹಿಂದಿನ ವ್ಯಾಜ್ಯವೇ ಕಾರಣ. ಸಂಗಪ್ಪನೂ ನದಿಯಲ್ಲಿಯೇ ಕೊಚ್ಚಿ ಹೋಗಿದ್ದರಿಂದ ಅವನ ಪ್ರೀತ್ಯರ್ಥವಾಗಿ ಈಶ್ವರನಿಗೆ "ಸಂಗಮೇಶ್ವರ" ನೆಂಬ ಹೆಸರನ್ನಿಟ್ಟು ಸಂಕ್ರಮಣದ ಕರಿಯ ದಿವಸ ಜಾತ್ರೆ ಮಾಡುತ್ತಾರೆ. ಹಿಂದಿನ ಪಾಪದ ಪ್ರಾಯಶ್ಚಿತ್ತಕ್ಕೆ ಕೂಡಲದ ಜನರು ಗುರುಗಳ ಪಾದಗಳನ್ನು ತಲೆಯ ಮೇಲೆ ಇರಿಸಿಕೊಳ್ಳುತ್ತಾರೆ. ಹೀಗಾಗಿ ನಾಗನೂರಿನವರು ಅಲ್ಲಿ ನಿಂತೇ ಜಾತ್ರೆ ನೋಡುತ್ತಾರೆ. ಸಂಗನು ಕತ್ತಿಯನ್ನು ಆ ನೀರಿನಲ್ಲಿ ತೊಳೆದದ್ದರಿಂದ ಅದು ಇಂದಿಗೂ ಕೆಂಪಾಗಿಯೇ ಹರಿಯುತ್ತಿದೆ. ಹಳ್ಳಿಗರ ಕಥೆಗೆ ಸಾಕ್ಷಿಯಾಗಿ ಶಿಲಾಮುಖವು ನಿಂತಿದೆ.

# ಶಿವಗಂಗೆ

ಶಿವಗಂಗೆ ಮಲ್ನಾಡದಂಚಿನ ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ನಿಂತಿರುವ ಶೂನ್ಯ ದೇವಾಲಯ. ಶಿವನು ಸುಂದರವಾದ ದೇಗುಲದ ಗರ್ಭಗೃಹವನ್ನು ಶೂನ್ಯವನ್ನಾಗಿ ಮಾಡಿ, ಎದುರು ಇರುವ ತೀರ್ಥದಲ್ಲಿ ಕುಳಿತಿದ್ದಾನೆ. ಆ ದೇಗುಲದೆದುರು ಎರಡು ತೀರ್ಥಗಳಿವೆ. ಕಪ್ಪು ಶಿಲೆಯ ಸೋಪಾನಗಳನ್ನು ನಿರ್ಮಿಸಿದ್ದು ತೀರ್ಥದ ಆಳಕ್ಕೂ ಇಳಿಯಲು ಬರುವಂತಿದೆ. ಒಂದು ಗಂಗೆ ತೀರ್ಥ, ಇನ್ನೊಂದು ಶಿವತೀರ್ಥ. ಗಂಗೆತೀರ್ಥ ಸದಾ ತುಂಬಿರುತ್ತದೆ. ಅದರ ಜಲವು ರಕ್ತದಂತೆ ಕೆಂಪು, ಕಲ್ಲುಸಕ್ಕರೆಯಂತೆ ಸವಿ. ಒಂದೇ ಮಾರಿ ನಂತರದಲ್ಲಿರುವ ಶಿವತೀರ್ಥವು ಬರಿದು. ಎರಡು ತೀರ್ಥಗಳ ಮೇಲೂ ವರ್ಷ ಋತು ಬೇಕಾದಷ್ಟು ಜಲವನ್ನು ಸುರಿಸಿದರೂ ಗಂಗೆ ತುಂಬಿ ಹರಿಯುತ್ತಾಳೆ; ಶಿವನು ಮಾತ್ರ ಬರಿದಾಗಿಯೇ ನಿಲ್ಲುತ್ತಾನೆ. ಗಂಗೆತೀರ್ಥವೆಂದರೆ ಗ್ರಾಮ ದೇವತೆ. ಅವಳ ಜಲವನ್ನು ಆ ಗ್ರಾಮದವರೇ ಕುಡಿಯುತ್ತಾರೆ. ಅದರ ಜಲವು ಬತ್ತಿದರೆ ಸುಮಾರು ನಾಲ್ಕಾರು ಗಾವುದ ದೂರದಲ್ಲಿ ಕುಡಿಯುವ ನೀರೇ ದೊರೆಯುವದಿಲ್ಲ. ಅಂತಲೇ ಆ ಶೂನ್ಯ ದೇವಾಲಯಕ್ಕೆ ಯಾರೂ ಬಾರದೆ, ಆ ಗಂಗೆತೀರ್ಥಕ್ಕೆ ಬಂದು ಅವಳಿಗೆ ಪೂಜೆ ನೈವೇದ್ಯಗಳನ್ನು ಹಳ್ಳಿಗರು ಸಲ್ಲಿಸುತ್ತಾರೆ. ಬರಿದಾದರೂ ಶಿವತೀರ್ಥದಲ್ಲಿ ನಿತ್ಯವೂ ಮೂರು ಮುಕ್ಕು ಜಲವು ಬರುತ್ತದೆ. ಆ ನೀರು ಉಪ್ಪು. ಆ ಜಲವನ್ನು ದೇಹಕ್ಕೆ ಲೇಪಿಸಿಕೊಂಡರೆ ತೊನ್ನಿನಂಥ ತ್ವಚರೋಗಗಳು ವಾಸಿಯಾಗುವವೆಂಬ ವದಂತಿಯಿದೆ. ಅಂತಲೇ ಆ ಶಿವತೀರ್ಥದ ಮೂರು ಮುಕ್ಕು ನೀರಿಗಾಗಿ ರೋಗಗ್ರಸ್ತರ ಬಳಗವೇ ಕಾದು ನಿಂತಿರುತ್ತದೆ. ಇಂದಿಗೂ ಮಹಾರೋಗದಂತಹ ವ್ಯಾಧಿಯಿದ್ದವರೂ ಅಲ್ಲಿ ಬರುತ್ತಾರೆ.

ಆ ತೀರ್ಥದ ಆಳದಲ್ಲಿ ಶಿವನು ಕುಳಿತಿದ್ದಾನೆ. ಶಿವನಿಗೆ ಕೋಪ ಬಂದು ದಕ್ಷೆ ಅಂತಹ ಸುಂದರ ಸೌಧವನ್ನು ಶೂನ್ಯವನ್ನಾಗಿ ಮಾಡಿ ಆ ತೀರ್ಥದಲ್ಲಿ ಕುಳಿತಿದ್ದಾನೆಂದು ಕೆಲವರು ಅಂದರೆ, ಯವನರ ಕೈಗೆ ಸಿಲುಕಿ ಶಿವನಿಗಾಅವಸ್ಥೆ ಬಂದಿದೆಯೆಂದು ಕೆಲವರು ಹೇಳುತ್ತಾರೆ. ಇನ್ನೊಂದು ಆ ತೀರ್ಥಗಳ ಬಗ್ಗೆ ಅತಿ ವಿಚಿತ್ರ ಸಂಗತಿಯಿದೆ. ಶಿವನ ತೀರ್ಥದಲ್ಲಿ ನಿಂತು "ಶಿವಾ ! ಏ ಶಿವಾ !" ಎಂದು ಕೂಗಿದರೆ "ಪಾಪಿ, ಪಾಪಿ" ಎಂಬ ಸುಸ್ಪಷ್ಟವಾದ ಪ್ರತಿಧ್ವನಿ ಬರುತ್ತದೆ ಅದೇ ರೀತಿ ಗಂಗೆತೀರ್ಥಕ್ಕೆ ಹೋಗಿ "ಗಂಗಾ ! ಗಂಗವ್ವಾ !" ಎಂದರೆ "ನೀವೇ ನೀವೇ" ಎಂಬ ಪ್ರತಿಧ್ವನಿ ಬರುತ್ತದೆ. ಒಂದೇ ಮಾರಿಸಂತರದ ಎರಡು ತೀರ್ಥಗಳಲ್ಲಿ ಹೀಗೆ ಅಜಗಜಾಂತರ !

ಆ ತಿರ್ಥಗಳಿಂದ ಅವುಗಳ ಬಳಿಯಿರುವ ಗ್ರಾಮಕ್ಕೆ ಶಿವಗಂಗೆ ಗ್ರಾಮ ವೆನ್ನುತ್ತಾರೆ. ಆ ದೇಗುಲದ ಹಿಂದೆ ಕೂರಿಗೆ ಐವತ್ತಕ್ಕೂ ಮೇಲ್ಪಟ್ಟು ಜಮೀನಿದೆ. ಯಾರು ಬೇಕಾದವರೂ ಅದನ್ನು ಉತ್ತು ಬೆಳೆಯನ್ನು ಪಡೆದುಕೊಳ್ಳ ಬಹುದು. ಅದು ಆ ದೇವಾಲಯಕ್ಕೆ ಸೇರಿದ ಭೂಮಿ. ಯಾರದೂ ಆತಂಕ ವಿಲ್ಲ. ನಿರ್ಗತಿಕರಾದವರಷ್ಟೇ ಆ ಭೂಮಿಯನ್ನು ಹದಗೊಳಿಸಿ ತಮ್ಮ ಉದರ ನಿರ್ವಹಣೆಯನ್ನು ಮಾಡಿಕೊಳ್ಳುತ್ತಾರೆ. ಕೊಂಚ ಸ್ಥಿತಿವಂತನು ಎಂದಿಗೂ ಆ ಭೂಮಿಗಾಗಿ ಆಶಿಪಡುವದಿಲ್ಲ. ಅದು ಅಲ್ಲಿಯ ಪರಂಪರೆ. ಭೂಮಿ ಹಾಳು ಬಿದ್ದರೂ ಆದನ್ನು ಅನುಭೋಗಿಸುವವರಿಲ್ಲ. ಈ ರೀತಿ ಆ ಶಿವಗಂಗೆ ಗ್ರಾಮವು ಒಂದು ವಿಚಿತ್ರ ರೀತಿಯದಿದೆ. ಸುಂದರ ದೇಗುಲದಲ್ಲಿ ಶಿವನೇಕಿಲ್ಲ? ಒಂದೇ ಮಾರಿಸಂತರದ ಎರಡು ತೀರ್ಥಗಳಲ್ಲಿ ಅದೇಕೆ ಅಷ್ಟು ಭಿನ್ನ ಲಕ್ಷಣ ? ಅವರವರ ಹೆಸರು ಕೂಗಿದರೆ ತೀರ್ಥಗಳೇಕೆ ಆ ರೀತಿ ಪ್ರತಿಧ್ವನಿ ಕೊಡುವವು? ಒಂದರ ಜಲವು ವಿಪುಲವಾಗಿ ಕೆಂಪಿದ್ದು ಸಕ್ಕರೆಯ ಮಧುರತ್ವವನ್ನು ಪಡೆದರೆ, ಇನ್ನೊಂದು ತೀರ್ಥವು ಸ್ವಚ್ಛವಾದ ಉಪ್ಪುರುಚಿಯ ಮೂರೇ ಮುಕ್ಕುಗಳನ್ನು ಇಟ್ಟುಕೊಂಡೇಕೆ ನಿಂತಿದೆ? ತಲೆಮಾರುಗಳಿಂದಲೂ ಇಳಿದು ಬಂದ ಶಿವ ಗಂಗೆಯ ಕತೆಯನ್ನು ಕೇಳಿದರೆ, ಆ ಶೂನ್ಯ ದೇಗುಲ, ತೀರ್ಥಗಳ ವೈಚಿತ್ರ್ಯ, ಭೂಮಿಯಿದ್ದೂ ಆದನ್ನು ಉಪಯೋಗಿಸದ ಕಾರಣ ಗೊತ್ತಾಗುವವು.

ಸುಮಾರು ಆರು ತಲೆಮಾರಿನಾಚೆಯ ಸತ್ಯ ಕಥೆ : ಶಿವಪ್ಪ ಶಿವಗಂಗೆ ಗ್ರಾಮದ ಗೌಡ. ಗೌಡನೆಂದರೆ ಗ್ರಾಮದ ತಂದೆಯಿದ್ದಂತೆ. ಗಂಗೆ ಶಿವಪ್ಪ

ಗೌಡನಿಗೆ ಅನುರೂಪವಳಾದ ಧರ್ಮಪತ್ನಿ. ಶಿವಪ್ಪಗೌಡನಿಗೆ ಸಿರಿವಂತಿಕೆ ತಲೆ ತಲಾಂತರದಿಂದ ಇಳಿದು ಬಂದಿತ್ತು. ಆಗರ್ಭ ಶ್ರೀಮಂತ, ಗ್ರಾಮದ ಅಧಿಕಾರಿ. ಗಣ್ಯ ಗೃಹಸ್ಥ, ರತಿಯಂತಹ ಸಹಧರ್ಮಿಣಿ. ಆದರೂ ಶಿವಪ್ಪನ ಮುಖದ ಮೇಲೆ ಒಂದು ರೀತಿಯ ಚಿಂತೆ ನೃತ್ಯ ಮಾಡುತ್ತಿತ್ತು. ರತಿಯಂತಹ ಹೆಂಡತಿ, ಕುಬೇರನಷ್ಟು ಸಂಪತ್ತು ಇರುವಾಗ ಶಿವಪ್ಪನಿಗಾವರಿಸಿದ ಚಿಂತೆಯನ್ನು ಕುರಿತು ಗ್ರಾಮವೇ ಮಾತನಾಡಿಕೊಳ್ಳುತ್ತಿತ್ತು. ತಮ್ಮ ನಂತರ ತಮ್ಮ ವಂಶವನ್ನು ಉದ್ಧರಿಸಬಲ್ಲ ಕುಲದೀಪಕನಿಲ್ಲವೆಂದು ಅವರೀರ್ವರಿಗೂ ಚಿಂತೆ.

"ಶಿವಪ್ಪ ರತಿಯಂತಹ ಗಂಗೆಯ ದೇಹವನ್ನು ಮುಟ್ಟದೆ ಮಕ್ಕಳಾಗುವ ಬಗೆಯೆಂತು?" ಗ್ರಾಮದಲ್ಲಿ ಸದಾ ಕೇಳಿಬರುತ್ತಿದ್ದ ಸೊಲ್ಲು. ಗಂಗೆಯನ್ನು ಮದುವೆಯಾದ ಎರಡೇ ವರ್ಷಗಳಲ್ಲಿ ಶಿವಪ್ಪನ ಆಡಕೆಯಾಕಾರದ ತೊನ್ನು ವ್ಯಾಧಿ ಸಮಗ್ರ ದೇಹವನ್ನೇ ಆವರಿಸಿತ್ತು. ಗಂಗೆ ಧರ್ಮಪತ್ನಿಯಾದುದಕ್ಕೆ ತಾನು ಶಿವಪ್ಪನ ಎಂತಹ ದೇಹವನ್ನೂ ಮುಟ್ಟಲು ಸಿದ್ಧಳಿರುವೆನೆಂದು ಹೇಳಿದಳು. ಆತನ ಪ್ರೇಮವನ್ನಾಶಿಸಿ ಬೇಡಿಕೊಂಡಳು. ಆದರೆ ಶಿವಪ್ಪನೇ ಅವಳನ್ನು ಮುಟ್ಟಲು ನಿರಾಕರಿಸಿದನು. ತನಗೆ ತೊನ್ನು ಬಂದುದರಿಂದ ತಾನು ಪಾಪಿಷ್ಠನೆಂದೇ ಅವನ ಭಾವನೆ. ತನ್ನ ಸಂಪರ್ಕದಿಂದ ತನ್ನ ವ್ಯಾಧಿಯು ಬೇರೆಯವರಿಗೆ ಅಂಟಲೂ ಬಹುದೆಂದು ಎಣಿಸಿ ಅಂಜಿದ್ದನು. ಅಂತಲೇ ಗಂಗೆಗೆ ಸ್ಪಷ್ಟವಾಗಿ ಹೇಳಿದ್ದನು. ಈ ರೀತಿ ದೈವವಿದ್ದರೂ ದರಿದ್ರತೆಯಿಂದ ಇಬ್ಬರೂ ಬಳಲುತ್ತಿದ್ದರು. ಶಿವಪ್ಪನ ಮಾತೆಂದರೆ ಭೀಷ್ಮಪ್ರತಿಜ್ಞೆ. ಅವನ ಮಾತನ್ನು ಅಲ್ಲಗಳೆಯುವ ಶಕ್ತಿ ಶಿವಗಂಗೆಯ ತೃಣಕ್ಕೂ ಇರುತ್ತಿರಲಿಲ್ಲ. ಯಾರೋ ಶಿವಪ್ಪಗೌಡನಿಗೆ "ಹಣತೆ ನಿಲ್ಲಬೇಕಾದರೆ ದತ್ತಕ ಮಾಡಿಕೋ ಗೌಡಪ್ಪ" ಎಂದು ಹೇಳಿದಾಗ ನೀಳವಾದ ಉಸಿರೊಂದನ್ನು ಬಿಟ್ಟು "ಗೋರಿಗೆ ಹೋದವನಿಗೇಕೆ ವಂಶೋದ್ಧಾರದ ವಿಚಾರ? ಜೀವಿಸಿದ್ದು ಜೀವವಿದೆಯೆಂತಲೆ ವಿನಾ, ಜೀವನದ ಯಾವ ಸುಖಕ್ಕೂ ಅಲ್ಲ. ನನ್ನೊಂದಿಗೆ ನನ್ನ ವಂಶವೇ ಈ ಶಿವಗಂಗೆ ಗ್ರಾಮದಲ್ಲಿ ಅಳಿಯಬೇಕೆಂದು ಸಂಕಲ್ಪವಿದೆ." ಎಂದು ತನ್ನ ನಿರಾಶಾವಾದವನ್ನು ಮಂಡಿಸಿದನು.

ಯಾಂತ್ರಿಕವಾಗಿ ಗೌಡನ ಕಾಲ ಕಳೆಯುತ್ತಿದ್ದಿತೇ ವಿನಾ ಯಾವ ಸೊಬಗೂ ಅವರ ಕಾರ್ಯದಲ್ಲಿರಲಿಲ್ಲ. ಪರೋಪಕಾರಕ್ಕಾಗಿ ತನ್ನ ಸಂಪತ್ತನ್ನು ವ್ಯಯಿಸಲು ಯೋಚಿಸುತ್ತಿದ್ದನು. ಆದರೆ ಅದು ಸುಭಿಕ್ಷೆಯ ಕಾಲ. ಬೇಡುವ ವರೇ ಬರುತ್ತಿರಲಿಲ್ಲ. ಶಿವಪ್ಪನಷ್ಟೇ ವಿಶಾಲಮತಿಯು ಗಂಗೆಯಲ್ಲೂ ನೆಲೆ ಯೂರಿತ್ತು. ಅಷ್ಟು ಸಂಪತ್ತಿದ್ದರೂ ಗಂಗೆ ನಿತ್ಯವೂ ಎರಡು ಕೊಳವೆ ಭತ್ತ ವನ್ನು ಕುಟ್ಟಿ ಉಣ್ಣುತ್ತಿದ್ದಳು. ಕಾಯಕವೇ ಕೈಲಾಸವೆಂಬ ಮಾತಿನಲ್ಲಿ ಅವ ಳದು ಪೂರ್ಣ ಶ್ರದ್ಧೆ. ಶಿವಪ್ಪ ಗಂಗೆಯೊಡನೆ ಹಾಸ್ಯ ಮಾಡುತ್ತಿದ್ದ, ಮಾತ ನಾಡುತ್ತಿದ್ದ, ನಗುತ್ತಿದ್ದ; ಆದರೆ ಎಲ್ಲವೂ ಸ್ವಾರಸ್ಯರಹಿತ ಮಾತು. ಶಿವಪ್ಪನ ಚಿತ್ತವೇ ಸ್ವಾಸ್ಥ್ಯದಲ್ಲಿರಲಿಲ್ಲ. ಅವನಿಗೆ ಇಹಲೋಕದ ಆಶೆಯಿಲ್ಲವೆಂಬುದರ ಅರಿವು ಗಂಗೆಗಿತ್ತು. ಅಂತಲೇ ಅವಳು ಪರಮಾತ್ಮನಿಗೆ ತನ್ನ ಪತಿಯ "ತೊನ್ನನ್ನು" ತನಗೆ ಕೊಟ್ಟರೆ ತಾನು ತೆಗೆದುಕೊಳ್ಳಲು ಸಿದ್ಧಳಿರುವಳೆಂದು ನಿತ್ಯವೂ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಳು. ಆದರೆ ವಿಧಿಯ ಆಜ್ಞೆಯನ್ನು ಮೀರುವವರಾರು ?

ಒಮ್ಮೆ ಶಿವಗಂಗೆ ಗ್ರಾಮದ ಮೇಲೆ ಮಳೆರಾಜನಾದ ಇಂದ್ರ ದೇವನು ಕೋಪಗೊಂಡನು. ವರುಷಗಳೆರಡು ಕಳೆದರೂ ವರ್ಷಋತು ಒಂದು ಬಿಂದು ವನ್ನೂ ಸುರಿಸಲಿಲ್ಲ. ಗಂಗೆತೀರ್ಥದ ಜಲವು ಬತ್ತಿ ಹೋಗಲು ಬಂದಿತು. ಆ ತೀರ್ಥವನ್ನು ಬಿಟ್ಟರೆ ಆ ಗ್ರಾಮಕ್ಕೆ ಹತ್ತೆಂಟು ಗಾವುದ ದೂರದಲ್ಲಿ ಕುಡಿಯುವ ನೀರು ದೊರೆಯುತ್ತಿರಲಿಲ್ಲ. ಹಗಲಿರುಳು ಮುಕ್ಕು ನೀರಿಗಾಗಿ ಗ್ರಾಮದ ಜನರೆಲ್ಲರೂ ತೀರ್ಥದ ಬಳಿ ಸೇರುತ್ತಿದ್ದರು. ಶಿವಪ್ಪನಿಗೆ ಗ್ರಾಮದ ತೊಂದ ರೆಯು ಅರಿವಾಯ್ತು. ಅಂದು ಕೇವಲ ಗಂಗೆತೀರ್ಥ ಒಂದೇ ಇತ್ತು. ಶಿವ ತೀರ್ಥವು ಇದ್ದಿರಲಿಲ್ಲ. ಗೌಡರೂ ಮಳೆಗಾಗಿ ದೇವರನ್ನು ಪ್ರಾರ್ಥಿಸಿದರು. ಮೋಡಗಳು ರಾಶಿರಾಶಿಯಾಗಿ ಶಿವಗಂಗೆಯ ಮೇಲೆ ಹಾರಿ ಹೋದರೂ ಹನಿ ಜಲವನ್ನೂ ಸುರಿಸಲಿಲ್ಲ. ಹತ್ತಾರು ಗಾವುದಗಳ ಮೇಲೆ ಮಳೆಯಾಯಿತೆಂಬ ವಾರ್ತೆಯು ಶಿವಗಂಗೆಗೆ ಬರುತ್ತಿತ್ತಲ್ಲದೆ, ಶಿವಗಂಗೆಯಲ್ಲಿ ಮಳೆಯಾಯಿತೆಂದು ಎಲ್ಲಿಯೂ ಕೇಳಿ ಬರುತ್ತಿರಲಿಲ್ಲ. ಇದೆಲ್ಲದಕ್ಕೂ ತಮ್ಮ ಗ್ರಾಮದ ಪಾಪವೇ ಕಾರಣವೆಂದು ಜನ ಭಾವಿಸಿದರು. ಯಾರೋ ಕುಹಕಿಗಳು, ಶಿವಪ್ಪನ ತೊನ್ನಿನ ಪ್ರಭಾವವೆಂದು ಉಸುರಿದರು. ತೊನ್ನಿನಂತಹ ವ್ಯಾಧಿಯಿಂದ ಶಿವ

ನನ್ನು ಪೂಜಿಸಿದ್ದಕ್ಕೆ ಅವನು ಕೋಪಗೊಂಡನೆಂದು ಅವರು ಪ್ರತಿಧ್ವನಿಸಿದರು. ಮಾತು ಕಿವಿಯಿಂದ ಕಿವಿಗೆ ಹರಿದು ಗಂಗೆ ಹಾಗೂ ಶಿವಪ್ಪಗೌಡನ ವರೆಗೂ ಹೋಯಿತು.

ಈ ಮಾತುಗಳನ್ನು ಕೇಳಿದಾಗ ಕಿವಿಯಲ್ಲಿ ಲೋಹವನ್ನು ಕಾಸಿ ಸುರಿವಿದಂತಾಯ್ತು. ಗಂಗೆ ಸಮಾಧಾನವನ್ನು ಹೇಳಿದಳು. ತನ್ನ ಚಾರಿತ್ರ್ಯಕ್ಕೆ, ಗಾಂಭೀರ್ಯಕ್ಕೆ, ಮರ್ಯಾದೆಗೆ ಕುಂದು ಬಂದಿತೆಂದು ಚಿಂತಿಸಿದನು. ಗಂಗೆಗೆ ಶಿವಪ್ಪನ ರೀತಿ ನೀತಿಗಳನ್ನು ಕಂಡು ಅಂಜಿಕೆ ಬಂದಿತು, ಇಲ್ಲದ ಧೈರ್ಯವನ್ನು ತಂದುಕೊಂಡು "ಕ್ಷುಲ್ಲಕರ ಮಾತುಗಳಿಂದ ಮನಸ್ಸನ್ನೇಕೆ ನೋಯಿಸಿಕೊಳ್ಳುತ್ತೀರಿ? ನಿಮ್ಮಲ್ಲಿ ಅಪಾರ ಸಂಪತ್ತಿದೆ. ಆ ಗಂಗೆತೀರ್ಥದ ಬಳಿ ನೀವೂ ಒಂದು ತೀರ್ಥವನ್ನು ಕಟ್ಟಿಸಿರಿ. ಅದರಲ್ಲಿ ಜಲ ಬಿದ್ದರೆ ಅದನ್ನು ಗ್ರಾಮದವರು ಕುಡಿದು ತೃಪ್ತಿ ಪಡಬಹುದು." ಎಂದು ಅವಳು ಹೇಳಿದಳು. ಗಂಗೆಯ ಸೂಚನೆ ಶಿವಪ್ಪನಿಗೆ ಮಾನ್ಯವಾಯಿತು. ಮಂಗಲ ಮುಹೂರ್ತವನ್ನು ನೋಡಿ ಗಂಗೆತೀರ್ಥದಿಂದ ಮಾರಂತರದಲ್ಲಿ ಒಂದು ಹೊಸ ತೀರ್ಥವನ್ನು ಕಟ್ಟಿಸಲು ಪ್ರಾರಂಭಿಸಿದನು. ಹೊಸದಾಗಿ ನಿರ್ಮಿತವಾಗುತ್ತಲಿದ್ದ ತೀರ್ಥವು ಗಂಗೆಗಿಂತ ಆಳವಾಗಿ ಹೋದರೂ ಮುಕ್ಕು ನೀರು ಬರುವ ಸೆಲೆಯೇ ಕಾಣಲಿಲ್ಲ. ಪಾಪಿಷ್ಠ ಬಂಜೆಯು ಯಾವ ಕೆಲಸ ಮಾಡಿದರೂ ಪುಣ್ಯವು ಬರಲಾರದೆಂದು ಕೆಲವರು ಟೀಕಿಸಿದರು. ಶಿವಪ್ಪನ ಚಿಂತೆ ನಿರಾಶೆಗಳು ಬೆಳೆಯತೊಡಗಿದವು. ತಾನಿನ್ನು ಜೀವಿಸುವದರಲ್ಲಿ ಅರ್ಥವಿಲ್ಲೆಂದು ಗಂಗೆಗೆ ಶಿವಪ್ಪನು ನುಡಿದನು. ಗಂಗೆಯ ಭೀತಿಯು ಭೂತಾಕಾರವಾಯಿತು. ಶಿವಪ್ಪನು ಪುಣ್ಯದ ಕೆಲಸಕ್ಕೆ ಕೈಹಾಕಿದರೂ ಅದರಲ್ಲಿ ಯಶಸ್ಸು ಸಿಗಲಿಲ್ಲ.

ಗಂಗೆ ಶಿವಪ್ಪನಿಗೆ ಹೇಳಿದಳು: "ಯಾವದಾದರೂ ಜ್ಯೋತಿಷಿಗಳನ್ನು ಕರೆದು ಇದರ ಪರಿಹಾರವನ್ನು ಕೇಳಿರಿ. ಅವರು ಹೇಳಿದಂತೆ ನಡೆದರೆ ನೀರು ಬಂದಾವು." ಎಂದು ಒತ್ತಾಯಪಡಿಸಿದಳು.

ಸಂಕಟ ಬಂದಾಗ ಮುನ್ ಸೂಚನೆಯ ಭಾವೀ ಸುಖವೆಂದರೆ ನಿರಾಶಾಮಯ ಕಾರ್ಮೋಡಗಳಲ್ಲಿ ಕಾಣುವ ಆಶೆಯ ಮಿಂಚು. ಜ್ಯೋತಿಷಿಗಳು ಬಂದರು. ಏನೇನೋ ಗುಣಿಸಿ ಹೇಳಿದರು: "ಗಂಗೆಯ ಜಲವು ಬತ್ತಿದ್ದಕ್ಕೆ,

ಗ್ರಾಮಕ್ಕೆ ಮಳೆ ಬಾರದಿದ್ದುದಕ್ಕೆ, ಹಾಗು ನೀನು ಹೊಸದಾಗಿ ನಿರ್ಮಿಸಿದ ತೀರ್ಥವು ಬಂಜೆಯಾದುದಕ್ಕೆ ನಿನ್ನ ಮನೆತನದ ಪಾಪವೇ ಕಾರಣ. ಇಂದು ಮಳೆಯಾಗಿ ಗಂಗೆತೀರ್ಥಕ್ಕೆ ಜಲವು ಬರಬೇಕಾದರೆ ಅದಕ್ಕೊಂದು ನರಬಲಿಯ ನ್ನೀಯಬೇಕು." ಎಂದು ಹೇಳಿದರು.

ನರಬಲಿ ಎಂದೊಡನೆಯೇ ಶಿವಪ್ಪನ ಮುಖದ ಮೇಲೆ ಎಂದೂ ಕಾಣದ ಆನಂದವು ಕುಣಿಯಹತ್ತಿತು. ಗಂಗೆಯ ಮುಖವನ್ನು ಭೀತಿಯಾವರಿಸಿತು. ನಾನೇಕೆ ಜ್ಯೋತಿಷಿಗಳನ್ನು ಕೇಳಲು ಹೇಳಿದೆನೆಂದು ವಿಷಾದಿಸಿದಳು. ಎಷ್ಟೋ ದಿವಸದಿಂದ ಮರೆಯಾದ ಶಿವಪ್ಪನ ತುಟಿಗಳಲ್ಲಿ ನಗೆಯು ನಲಿಯುತ್ತಿದ್ದುದಕ್ಕೆ ಗಂಗೆಯೂ ಆದರಲ್ಲಿ ಪಾಲುಗಾರಳಾಗಬೇಕಿತ್ತು. ಆದರೆ ಭಾವೀ ಚಿತ್ರದ ವಿಚಿತ್ರ ರೂಪವು ಅವಳೆದುರು ಬಂದು ಅವಳನ್ನು ಅಂಜಿಸಿತು ಜ್ಯೋತಿಷಿ ಗಳೆದ್ದು ಹೋದಮೇಲೆ ಶಿವಪ್ಪನು ತಾನೇ ನರಬಲಿಯಾಗುವೆನೆಂದು ನಿಶ್ಚಯಿಸಿ ಕೊಂಡು ಗಂಗೆಗೆ ಹೇಳಿದನು.

" ಶಿವಪ್ಪನ ದೇಹ ಅಶುದ್ಧ, ಅಪವಿತ್ರ, ನರಬಲಿಗೆ ಅಯೋಗ್ಯವಿದೆ " ಎಂದು ಬಲ್ಲವರು ಹೇಳಿದರು. ಶಿವಪ್ಪನು ನೊಂದುಕೊಂಡನು. ಗಂಗೆಯ ಮುಖದಲ್ಲಿ ಇಂದು ಗೆಲವು ಬಂತು. ಶಿವಪ್ಪನಿಗೆ ಮೇಲಿಂದ ಮೇಲೆ ಆಘಾತ ಗಳು ಬರಹತ್ತಿದವು. ಇದೇ ಬಹುಶಃ ಕೊನೆಯದಾಗಿರಬಹುದೇನೋ! ತನ್ನ ದೇಹವು ನರಬಲಿಗೂ ಅಯೋಗ್ಯವೆಂದ ಮೇಲೆ ದೇವರು ತನ್ನನ್ನೇಕೆ ನಿರ್ಮಿಸಿ ದನೆಂದು ಮನಸ್ಸಿ ಬಯ್ದನು. ತಾನು ಪರೋಪಕಾರಕ್ಕಾಗಿ ಜೀವಿಸದೆ ಪರೋಪಜೀವಿಯಾದೆ ಎಂದು ವ್ಯಥೆ ಪಟ್ಟುಕೊಂಡನು. ಯಾರು ನರಬಲಿಗೆ ಸಿದ್ಧರಾಗುವರೋ ಅವರಿಗೆ ತಾನು ಹಾಗು ಗಂಗೆಯುಟ್ಟ ಬಟ್ಟೆಯನ್ನು ಬಿಟ್ಟು ಸಮಗ್ರ ಸಂಪತ್ತನ್ನೇ ಕೊಡುವೆನೆಂದು ಸಾರಿದನು. ಆನೆ ಎತ್ತರದ ಸಂಪತ್ತಿಗೆ ಸಾಸಿವೆಯಾಕಾರದ ಜೀವನವನ್ನು ಕೊಡಲು ಯಾರೂ ಮುಂಬರಲಿಲ್ಲ.

ನರಬಲಿಯ ಚಿಂತೆ ಶಿವಪ್ಪಗೌಡನಿಗೆ ಹೆಚ್ಚಾಯಿತು. ಕೊನೆಗೆ ಗಂಗೆ ಯನ್ನೇ ನರಬಲಿಗೆ ಒಪ್ಪಲು ಕೇಳಿದನು. ಇದು ವರೆಗೂ ಜೀವನದ ಸಂಗಾತಿ ಯಾಗಿ ಶಿವಪ್ಪನ ಸುಖದುಃಖಗಳಲ್ಲಿ ಸಮಭಾಗಿನಿಯಾಗಿ ವರ್ತಿಸಿದ ಗಂಗೆ ಆದೇಕೊ ಕೊಂಚ ವಿಹ್ವಲಳಾಗಿ ಅಸಮ್ಮತಿಯನ್ನು ಪ್ರದರ್ಶಿಸಿದಳು. ಶಿವಪ್ಪ

ನಿಗೆ ಅವಳೆದುರು ಕೊಡಲು ಯಾವ ಉತ್ತರವೇ ಇರಲಿಲ್ಲ. ತಾನೇ ರತಿಯಂತಹ ಹೆಂಡತಿಯನ್ನು ಒಯ್ದು ಕೊಲೆ ಮಾಡುವದು ಅಮಾನುಷ ಕೃತ್ಯವೆನಿಸಿತು. ಅಸಮ್ಮತಿಯನ್ನು ಲೆಕ್ಕಿಸದೆ ಒತ್ತಾಯಪಡಿಸುವದು ಅಸಭ್ಯವೆನಿಸಿತು. ಅಂದು ರಾತ್ರಿ ಹಾಸಿಗೆ ಸೇರಿದಾಗ ಅವನೆದುರು ಭೂತವೇ ಬಂದು ಮಾತನಾಡಿದಂತಾಯಿತು. "ನೀನು ಭೂಮಿಯ ಮೇಲೆ ಜನಿಸಿ ಯಾವ ಸುಕೃತವನ್ನು ಮಾಡಿದಿ ? ನಿನ್ನ ಪಾಪದಿಂದ ನೀನೇ ಹಾಳಾಗಿ ಹೋಗಿದ್ದರೆ ಯಾರಿಗೂ ದುಃಖವಿರಲಿಲ್ಲ. ಆದರೆ ನಿನ್ನ ತ್ವಚೆಯ ವ್ಯಾಧಿಯಿಂದ ಶಿವಗಂಗೆ ಗ್ರಾಮವನ್ನೇ ನಾಶಪಡಿಸಿದಿ. ಶಿವಗಂಗೆ ಗ್ರಾಮದವರು ಕುಡಿಯುವ ಜಲವಿಲ್ಲದ್ದಕ್ಕೆ ನಿನ್ನ ಪಾಪವೇ ಕಾರಣವೆಂದು ಹೇಳುವ ಮಾತಿನಲ್ಲಿ ನಿನಗೆ ನಂಬಿಗೆಯಿಲ್ಲವೇನು ? ನೀನು ಹಾಗು ಮನೆತನವು ಈ ಅಪರಾಧಕ್ಕೆ ಹೊಣೆ. ನಿನ್ನ ದೇಹವು ಬಲಿಗೆ ಅಪವಿತ್ರವಾದರೆ ಗಂಗೆಯನ್ನೇಕೆ ಬಲಿಕೊಟ್ಟು ಲೋಕಕಲ್ಯಾಣವನ್ನು ಮಾಡಬಾರದು ಶಿವಪ್ಪಾ ? ಗಂಗೆಯೇ ಯೋಗ್ಯವಾದ ಬಲಿ. ಬಲಿಗೆ ಯಾರೂ ಸ್ವಸಂತೋಷದಿಂದ ಒಪ್ಪಿಗೆಯನ್ನೀಯುವದಿಲ್ಲ. ಒತ್ತಾಯದಿಂದ ಎಳೆದು ತಂದು ಗಂಗೆತೀರ್ಥಕ್ಕೆ ಬಲಿ ಕೊಡು."

ಶಿವಪ್ಪನು ಗಂಗೆಯನ್ನೇ ಬಲಿ ಕೊಡಲು ಪೂರ್ಣ ನಿರ್ಧಾರ ಮಾಡಿದನು. ಯಾರೆದುರೂ ಈ ಮಾತನ್ನು ಒಡೆಯಲಿಲ್ಲ. ಗಂಗೆಯನ್ನು ಮದುವೆಯಾದ ಮೇಲೆ ಕಾಣದ ಒಂದು ಸ್ನೇಹಮಯ ಹಾಗು ಪ್ರೇಮಮಯ ದೃಷ್ಟಿಯಿಂದ ನೋಡಹತ್ತಿದನು. ಎಂದೂ ಮಾತನಾಡದಷ್ಟು ಮಾತನಾಡಹತ್ತಿದನು. ಗಂಗೆಗೆ ಶಿವಪ್ಪನ ರೀತಿ ನೀತಿಗಳು ಆನಂದವನ್ನಿತ್ತರೂ ಅವೇಕೋ ಒಂದು ವಿಚಿತ್ರತೆರನಾಗಿಯೇ ಕಾಣಹತ್ತಿತು. ನರಬಲಿಯ ವಿಚಾರವನ್ನು ಬಿಟ್ಟುಬಿಟ್ಟದ್ದಕ್ಕೆ ಗಂಗೆಗೆ ಸಂತಸವಾಯಿತು.

ಅಂದು ಅಮಾವಾಸ್ಯೆ. ಶಿವಪ್ಪನ ಮುಖದಲ್ಲಿ ಒಂದು ಗಂಭೀರ ಕಳೆ ಬಂದಿತ್ತು. ಅಂದು ಯಾರೊಡನೆಯೂ ಮಾತನಾಡಲಿಲ್ಲ. ತಲೆಯಲ್ಲಿ ಏನನ್ನೋ ಗುಣಿಸುತ್ತಲೇ ತಿರುಗಾಡುತ್ತಿದ್ದನು. ಹಗಲು ಕಳೆಯಿತು. ರಾತ್ರಿ ಕಾಲಿಕ್ಕಿತು ಮಧ್ಯರಾತ್ರಿ ಸರಿದಾಗ ಶಿವಪ್ಪನು ಗಂಗೆಯ ಹಾಸಿಗೆ ಬಳಿ ಬಂದು ಒಮ್ಮೆ ಅವಳನ್ನು ಪೂರ್ಣ ದೃಷ್ಟಿಯಿಂದ ನೋಡಿದನು. ಗಂಗೆಯ ಜನ್ಮವನ್ನು

ತಾನೇ ವ್ಯರ್ಥಗೊಳಿಸಿದೆನೆಂದು ವ್ಯಥೆ ಪಟ್ಟುಕೊಂಡನು. ತನ್ನನ್ನು ಮದುವೆ ಯಾದುದಕ್ಕೆ ಅವಳಿಗೆ ದೇಹದ ಸುಖವೇ ದೊರೆಯಲಿಲ್ಲವೆಂದು ವಿಷಾದಿಸಿದನು. ಪೂರ್ಣ ನಿದ್ರೆಯಲ್ಲಿ ಲೀನಳಾದ ಗಂಗೆಯನ್ನು ಶಿವಪ್ಪನು ಎಚ್ಚರಿಸಿದನು. ಅವ ಳಿಗೆ ಅಂಜಿಕೆಯಾಯಿತು. ಮಾತನಾಡಲು ಬಾಯಿಯೇ ಬರಲಿಲ್ಲ. ಕತ್ತಲೆ ಯಲ್ಲಿ ಕೈಹಿಡಿದು ಶಿವದೇಗುಲಕ್ಕೆ ಕರೆದೊಯ್ದನು. ದೇಗುಲದ ಸೊಡರು ಪ್ರಶಾಂತವಾಗಿ ಉರಿಯುತ್ತಿತ್ತು. ಶಿವಪ್ಪನು ಗಂಗೆಯನ್ನು ಶಿವನ ಪಾದಕ್ಕೆ ಹಾಕಿದನು. ಅವಳಿಗೆ ಶಿವಪ್ಪನು ಮಾಡುವ ಕಾರ್ಯದ ಅರಿವಾಯಿತು. ಯಾವ ಮಾತನ್ನೂ ಆಡಲಿಲ್ಲ. ಶಿವಪ್ಪಗೌಡನು ದೇಗುಲದಲ್ಲಿಯ ಮೂರ್ತಿಯ ಮುಂದೆ ಚಣಹೊತ್ತು ಮೌನವಾಗಿ ನಿಂತನು ಅವನಿಗೆ ಶಕ್ತಿಯ ಅವತಾರವು ಬಂದಿತ್ತು. ದೇಗುಲದಲ್ಲಿದ್ದ ಶಿವನ ಮೂರ್ತಿಯನ್ನು ಕಿತ್ತಿ ತೀರ್ಥದಲ್ಲಿ ಬಿಸಾಟಿದನು. ಗಂಗೆಯನ್ನು ಕೈಹಿಡಿದು ಗಂಗೆತೀರ್ಥದ ತಳಕ್ಕೆ ಕರೆದುಕೊಂಡು ಹೋಗಿ ಕುಡುಗೋಲಿನಿಂದ ಕಡಿದು ಚೂರು ಚೂರು ಮಾಡಿ ತೀರ್ಥದ ತುಂಬ ಚಲ್ಲಿದನು. ಅದೇ ರಕ್ತಮಯ ಕುಡುಗೋಲಿನಿಂದ ತಾನು ಅಗೆಯಿಸಿದ ತೀರ್ಥಕ್ಕೆ ಹೋಗಿ ತನ್ನ ಶಿರವನ್ನೇ ಅದಕ್ಕೆ ಆಹುತಿಯನ್ನಾಗಿ ಕೊಟ್ಟು ತನ್ನ ಯಾತ್ರೆಯನ್ನೇ ಪೂರೈಸಿದನು.

ಅಂದು ನಸುಕಿನಲ್ಲಿ ಮಳೆರಾಯನ ಕೃಪೆಯಾಯಿತು. ಬೆಳಗಿನ ಜಾವ ದಲ್ಲಿ ಬಂದ ಮಳೆ ಶಿವಗಂಗೆ ಗ್ರಾಮದವರನ್ನು ಹೊರಕ್ಕೆ ಬರದಂತೆ ಮಾಡಿತು. ರವಿಯು ನೆತ್ತಿಯ ಮೇಲೆ ಬರುವ ಹೊತ್ತಾಗಿದ್ದರೂ ಜಡಿಕಟ್ಟಿ ಬರುತ್ತಿದ್ದ ಮೇಘರಾಯನ ಕೋಪವು ಏರುತ್ತಲೇ ನಡೆದಿತ್ತು. ಗ್ರಾಮದವರು ಒಬ್ಬರ ಮುಖವನ್ನು ಒಬ್ಬರು ಅಂದು ನೋಡಲೇ ಇಲ್ಲ. ಶಿವಪ್ಪನ ಪಾಪಕ್ಕೆ ಮಳೆ ಯಾಗಿಲ್ಲ ಎಂದಾಡಿದವರಿಗೆ ಪಶ್ಚಾತ್ತಾಪವಾಗಿತ್ತು.

ಮಧ್ಯಾಹ್ನದ ಮೇಲೆ ಕೊಂಚ ಮಳೆ ಸರಿಯಿತು. ಗೌಡರಲ್ಲಿಗೆ ಮಾತ ನಾಡಲಿಕ್ಕೆ ಹೋಗಬೇಕೆಂದು ಆ ಗ್ರಾಮದ ಒಬ್ಬಿಬ್ಬ ಹಿರಿಯರ ಬಯಕೆಯಾ ಗಿತ್ತು. ಅವರು ಗೌಡರ ಮನೆಯ ಮುಂದೆ ಹೋಗಿ ನಿಂತು ಕೂಗಿದರು. ಮನೆಯ ಬಾಗಿಲವು ತೆರೆದೆಯಿದ್ದರೂ ಯಾವ ಪ್ರತ್ಯುತ್ತರವೂ ಬಾರದ್ದಕ್ಕೆ ಅವರು ಒಳಕ್ಕೆ ಹೋದರು. ಅಲ್ಲಿ ಯಾರೂ ಇಲ್ಲ. ತುಂಬಿದ ಮನೆ ತೆರವಾಗಿತ್ತು.

ಅವರಿಗೆ ಸಂಶಯ ಬಂದಿತು. ನೇರವಾಗಿ ಶಿವಾಲಯಕ್ಕೆ ಬಂದರು. ಅಲ್ಲಿ ಶಿವನ ಮೂರ್ತಿಯೇ ಇದ್ದಿರಲಿಲ್ಲ. ಗಂಗೆತೀರ್ಥದಲ್ಲಿ ಇಳಿದರು. ಗಂಗೆಯ ಜಲವು ಏರುತ್ತಿತ್ತು. ಜಲವು ಮೊದಲಿನಂತೆ ಕಾಣದೆ ನಸುಕೆಂಪಾಗಿ ಕಾಣು ತ್ತಿತ್ತು. ಸಂಶಯ ಬಂದು ಶಿವತೀರ್ಥದಲ್ಲಿ ಹಣಿಕಿ ಹಾಕಿದರು. ಶಿವಪ್ಪನ ಧಡ ಒಂದೆಡೆ ಹಾಗು ರುಂಡವೊಂದೆಡೆ ಬಿದ್ದಿತ್ತು. ಜನಕ್ಕೆ ಪೂರ್ಣ ಅರ್ಥವಾ ಯಿತು. ಶಿವಪ್ಪನು ತನ್ನ ಪತ್ನಿ ಗಂಗೆಯನ್ನೇ ನರಬಲಿಯನ್ನಾಗಿ ಕೊಟ್ಟನು. ಅಂತಲೇ ಮೇಘರಾಜನು ಬಂದು ಗಂಗೆತೀರ್ಥವು ತುಂಬಿತು. ಶಿವಪ್ಪನ ತ್ಯಾಗಕ್ಕೆ ಗ್ರಾಮವೇ ತಲೆದೂಗಿತು.

ಶಿವಪ್ಪ ತನ್ನ ಆಸ್ತಿಯನ್ನು ಬೇಕಾದವರು ಉಪಯೋಗಿಸಬೇಕೆಂದು ಬರೆ ದಿಟ್ಟಿದ್ದನು. ಅವನ ಹೊಲಗಳನ್ನೆಲ್ಲ ದೇಗುಲಕ್ಕೆ ಕೊಟ್ಟು ಅವನ ಮನೆಯ ಸಂಪತ್ತಿನಿಂದ ದೇಗುಲದ ಪ್ರಾಕಾರಗಳನ್ನು ಕಟ್ಟಿಸಿ, ಅಲ್ಲಿ ಮತ್ತೊಂದು ಶಿವ ಮೂರ್ತಿಯನ್ನು ಸ್ಥಾಪಿಸಿದರು. ಆ ಗಂಗೆತೀರ್ಥವು ತುಂಬಲು ಬಂದರೂ ಶಿವ ತೀರ್ಥದಲ್ಲಿ ಮೂರೇ ಮುಕ್ಕು ನೀರು ನಿಂತಿದ್ದವು. ಆ ಶಿವಮೂರ್ತಿಯನ್ನು ಪ್ರತಿಷ್ಠಾಪಿಸಿದ ಕೆಲವೇ ದಿನಗಳಲ್ಲಿ ಯಾರೋ ಕುಹಕಿಗಳು ಆ ಮೂರ್ತಿ ಯನ್ನು ಭಿನ್ನಗೊಳಿಸಿದರು. ಅಂದಿನಿಂದ ಆ ದೇಗುಲದಲ್ಲಿ ಮೂರ್ತಿಯನ್ನು ಸ್ಥಾಪಿಸುವ ಹವ್ಯಾಸಕ್ಕೆ ಯಾರೂ ಕೈಹಾಕಲಿಲ್ಲ.

ಅಂದಿನಿಂದ ಆ ತೀರ್ಥಗಳು ಆ ರೀತಿ ಪ್ರತಿಧ್ವನಿ ಕೊಡುತ್ತವೆ. ಶಿವಪ್ಪ ನಿಗೆ ಆತ್ಮಹತ್ಯೆ ಮಾಡುವ ಕಾಲಕ್ಕೆ ತಾನು ಪಾಪಿ ಎಂಬ ವಿಚಾರ ಬಂದಿತಂತೆ. ಆದಕ್ಕೆ ಅವನ ಹೆಸರನ್ನು ಕೂಗಿದರೆ ತಾನು ಪಾಪಿ ಎಂಬ ಪ್ರತಿಧ್ವನಿಯನ್ನು ಕೊಡುವನಂತೆ. ಗಂಗೆಯು ತನ್ನ ಪತಿಯು ಪಾಪಿಯೆಂಬ ಪ್ರತಿಧ್ವನಿಗೆ ಉತ್ತರ ವಾಗಿ "ನೀವೇ, ನೀವೇ" ಎಂದು ಹೇಳುವಳಂತೆ!

ಆ ದೇಗುಲದ ಹಿಂದಿದ್ದ ಗೌಡರ ಜಮೀನನ್ನು ಬೇಕಾದವರು ಉಪ ಯೋಗಿಸಲು ನಿರ್ಮುಕ್ತ ಮಾಡಿದರು. ಶಿವಪ್ಪನ ಸಂಪತ್ತನ್ನು ಉಪಭೋಗಿಸಿ ದರೆ, ತಮಗೂ ಆದೇ ಗತಿಯು ಬರಬಹುದೆಂದು ಯಾವ ಸ್ಥಿತಿವಂತರೂ ಆ ಭೂಮಿಗಾಗಿ ಆಶೆಪಡುವದಿಲ್ಲ. ಶಿವಪ್ಪನು ಆ ಶಿವಮೂರ್ತಿಯನ್ನು ತೆಗೆದೊಗೆ

ದದ್ದುಕ್ಕೆ ದೇಗುಲವು ಶೂನ್ಯವಾಯಿತು. ಶಿವಪ್ಪನು ತನ್ನ ಸರ್ವ ಸಂಪತ್ತನ್ನೇ ತ್ಯಾಗ ಮಾಡಿದ್ದಕ್ಕೆ ಅದರ ಫಲವು ಅವನಿಗೆ ಬಂದಿತಂತೆ. ತನ್ನಂತಹ ರೋಗವು ಯಾರಿಗೂ ಬರಬಾರದೆಂದು ಶಿವನನ್ನು ಪ್ರಾರ್ಥಿಸಿಕೊಂಡನಂತೆ. ಒಂದು ಪಕ್ಷಕ್ಕೆ ಬಂದರೆ ಆ ಜಲದಿಂದ ಕಡಿಮೆಯಾಗಲೆಂದು ಶಿವನು ಅವನಿಗೆ ಸಾಯುವ ಮುನ್ನ ವರವನ್ನಿತ್ತನಂತೆ! ಇಂದಿಗೂ ಜನರು ಬಂದು ಆ ಜಲದಿಂದ ವ್ಯಾಧಿಯನ್ನು ಕಡಿಮೆ ಮಾಡಿಕೊಳ್ಳುತ್ತಾರೆ.

# ಶಿವಪಾರ್ವತಿ

ನೇತ್ರಾವತಿಯು ನೃತ್ಯ ಮಾಡುತ್ತ ಗೆಲವಿನ ಮುಖದಲ್ಲಿ, ಶಿವಪಾರ್ವತಿ ಬೆಟ್ಟವನ್ನು ಸುತ್ತುವರಿದು, ಬೆಟ್ಟದಿಂದ ಮುಂದಕ್ಕೆ ಬಹುಮುಂದವಾಗಿ ಹರಿಯುತ್ತಾಳೆ. ನಯನ ಮನೋಹರವಾದ ನಿಸರ್ಗಮಯ ತೊಟ್ಟಿಲಿನಲ್ಲಿ ನೇತ್ರಾವತೀ ನದಿಯ ಜೋಗುಳದ ಉಲುಹನ್ನು ಕೇಳುತ್ತ, ಶಿವಪಾರ್ವತಿ ಬೆಟ್ಟವು ಶಾಂತವಾಗಿ ನಿದ್ರಿಸುತ್ತಿದೆ. ಬೆಟ್ಟದ ತುದಿಯಲ್ಲಿ ಬಯಲಿನೊಳಗೆ ಶಿವನ ಸುಂದರವಾದ ಕಪ್ಪುಶಿಲೆಯ ವಿಗ್ರಹವೊಂದು ನಿಂತಿದೆ. ಅದರ ಸುತ್ತಲೂ ಕಟ್ಟಡಗಳ ಭಗ್ನವಾದ ಕುರುಹುಗಳಿವೆ. ಆ ಮೂರ್ತಿಗೆ ಅಮೂಲ್ಯವಾದ ಆಭರಣಗಳು, ಅಪಾರ ಸಂಪತ್ತು ಹಾಗು ಭೂಮಿ ಇವೆಲ್ಲ ಇದ್ದರೂ, ದೇವರು ಮಾತ್ರ ದೇವಾಲಯವಿಲ್ಲದೆ ಹಾಗೆಯೇ ನಿಂತಿದ್ದಾನೆ. ದೇಗುಲವನ್ನು ನಿರ್ಮಿಸಬಾರದೆಂದು ಶಾಪವಿದೆಯಂತೆ. ಬೆಟ್ಟದ ಕೆಳಕ್ಕೆ ನೇತ್ರಾವತಿಯ ಪಾತ್ರದ ತೀರ ಸಮೀಪಕ್ಕೆ ಪಾರ್ವತಿಯ ದೇಗುಲವಿದೆ. ಪಾರ್ವತಿಯ ದೇಗುಲವು ನೋಡಲು ತುಂಬಾ ಸುಂದರವಿದೆ. ಕಲ್ಲಿನಲ್ಲಿ ಕಲಾಕೌಶಲ್ಯವು ಸೂರೆಗೊಂಡಿದೆ. ಸಮಗ್ರ ರಾಮಾಯಣದ ಚಿತ್ರಗಳನ್ನೇ ಪ್ರಾಕಾರದ ಗೋಡೆಗಳಲ್ಲಿ ಕೊರೆದಿದ್ದಾರೆ. ಶಿವನಿಗೂ ಪಾರ್ವತಿಗೂ ಒಂದು ಕೂಗಳತೆಯ ಅಂತರವಿದೆ. ಪಾರ್ವತಿಯ ದೇವಾಲಯದಲ್ಲಿ ನಿಂತು ನಗಾರಿಯನ್ನು ಬಾರಿಸಿದರೂ ಶಿವನ ಬಳಿಯಿದ್ದವರಿಗೆ ಕೇಳುವುದಿಲ್ಲ; ಆದರೆ ಪ್ರಶಾಂತ ವಾತಾವರಣದಲ್ಲಿ ಶಿವನ ವಿಗ್ರಹದ ಬಳಿ ಕುಳಿತು ವೀಣೆಯ ತಂತಿಯನ್ನು ಮೀಟಿದರೂ ಸಾಕು; ಸುಸ್ಪಷ್ಟವಾಗಿ ಪಾರ್ವತಿಯ ದೇಗುಲದಲ್ಲಿ ಕೇಳಿಬರುತ್ತಿದೆ. ಈ ವೈಚಿತ್ರ್ಯವನ್ನು ನೋಡಿ ಅನೇಕರು ಆಶ್ಚರ್ಯಪಟ್ಟಿದ್ದಾರೆ.

ವರ್ಷಾಋತುವಿನಲ್ಲಿ ನೇತ್ರಾವತಿಗೆ ಮಹಾಪೂರ ಬಂದು ಬೆಟ್ಟವನ್ನೇರಿ

ಶಿವನ ಪಾದಗಳನ್ನು ತೊಳೆದು ಅವಳು ಕೆಳಕ್ಕೆ ಹೋಗುತ್ತಾಳೆ. ಆದರೆ ಬೆಟ್ಟದ ಕೆಳಕ್ಕೆ ಇದ್ದ ಪಾರ್ವತಿಯ ದೇವಾಲಯಕ್ಕಾಗಲಿ ಅಥವಾ ದೇವಾಲಯದ ಸಮೀಪಕ್ಕಿರುವ ಶಿವಪಾರ್ವತಿ ಗ್ರಾಮಕ್ಕಾಗಲಿ ಅವಳು ಯಾವ ರೀತಿಯ ತೊಂದರೆಯನ್ನೂ ಕೊಡುವುದಿಲ್ಲ. ಬೆಟ್ಟದಿಂದ ನೇತ್ರಾವತಿಯು ಕಡಿದು ಕೊಂಡು ಪಾರ್ವತಿಯ ದೇವಾಲಯದ ಮೇಲೆ ಬೀಳುವಳೇನೋ ಎಂದು ಎನಿಸಿದರೂ, ಅವಳು ದೇವಾಲಯಕ್ಕಾಗಲಿ ಗ್ರಾಮಕ್ಕಾಗಲಿ ಬಾರದೆ, ತನ್ನ ಬಟ್ಟೆಯನ್ನು ಹಿಡಿದು ಹೋಗುತ್ತಾಳೆ. ಈ ನಿಸರ್ಗದ ಆಟವನ್ನು ನೋಡಲಿಕ್ಕೆ ಮಹಾಪೂರ ಬಂದ ಕಾಲದಲ್ಲಿ ದೇವಾಲಯದಲ್ಲಿ ಸಹಸ್ರಾರು ಜನರು ನಿಂತಿರುತ್ತಾರೆ ನೇತ್ರಾವತಿಯು ಶಿವನ ಪಾದವನ್ನು ತೊಳೆಯುವುದನ್ನು ನೋಡಿ ಜನರು ಆನಂದಪಡುತ್ತಾರೆ. ಈ ವಿಚಿತ್ರ ಮೂರ್ತಿಗಳ ಜಾತ್ರೆ ಪ್ರತಿವರುಷವೂ ನೆರೆಯುತ್ತದೆ. ಅಂದು ನೇತ್ರಾವತೀ ನದಿಯ ದಡದಲ್ಲಿ ವಾಸಿಸುವ ಮೀನುಗಾರರಿಗೆ ಹೆಚ್ಚಿನ ಪ್ರಾಶಸ್ತ್ಯ. ಜಾತ್ರೆಯ ದಿನದಂದು ಮೀನುಗಾರರ ಹೆಣ್ಣುಮಕ್ಕಳು ಶಿವನ ಮೂರ್ತಿಯ ಎದುರು ನೃತ್ಯ ಮಾಡುತ್ತಾರೆ. ದೇವರಿಗೆ ಆ ರೀತಿ ನೃತ್ಯಸೇವೆ ಮಾಡಿದರೆ, ತಾವು ಬಯಸಿದ ಫಲಗಳನ್ನು ದೇವರು ಕೊಡುವನೆಂಬ ಕಲ್ಪನೆಯು ಆ ಜನರಲ್ಲಿದೆ. ಆ ಜಾತ್ರೆಯ ಕಾಲಕ್ಕೆ ಪಾರ್ವತಿಗೆ ಒಂದು ವಜ್ರದ ಉಂಗುರವನ್ನು ಹಾಕುತ್ತಾರೆ. ಅದರ ಬೆಲೆ ಕಟ್ಟುವದೇ ಅಸಾಧ್ಯವಂತೆ. ಆ ಉಂಗುರವನ್ನು ಮುಟ್ಟಿ ನಮಸ್ಕರಿಸಿದರೆ, ಮದುವೆಯಾಗದಿದ್ದ ಹೆಣ್ಣುಮಕ್ಕಳಿಗೆ ಬಯಸಿದ ಪುರುಷನೊಡನೆ ಮದುವೆಯಾಗುವದೆಂಬ ನಂಬಿಕೆ ಆ ಮೀನುಗಾರರಲ್ಲಿದೆ. ಈ ಸಂಪ್ರದಾಯಗಳು ನೋಡಲಿಕ್ಕೆ ವಿಚಿತ್ರವಾಗಿ ಕಂಡರೂ, ಒಂದೊಂದು ಸಂಪ್ರದಾಯದ ಹಿಂದೆ ಒಂದೊಂದು ಕಥೆಯೇ ಅಡಗಿದೆ. ಅವರ ಸಂಪ್ರದಾಯಗಳಿಗೆ ತುಂಬಾ ಅರ್ಥವಿದೆ ಎಂಬುದು ಆ ಶಿವಪಾರ್ವತೀ ಗ್ರಾಮದವರು ಹೇಳುವ ಕಥೆಯನ್ನು ಕೇಳಿದರೆ ತಿಳಿಯುತ್ತದೆ.

ಸುಮಾರು ಹತ್ತೆಂಟು ಶತಕಗಳ ಹಿಂದಿನ ಘಟನೆಯಿದ್ದಿರಬೇಕು; ಅಂದು ಆ ಶಿವಪಾರ್ವತಿ ಬೆಟ್ಟ, ಗ್ರಾಮ ಹಾಗು ನದಿಯು ವಿಜಯದೇವನ ರಾಜ್ಯದಲ್ಲಿದ್ದುವು. ವಿಜಯದೇವನ ರಾಜಧಾನಿಗೂ ಈ ಶಿವಪಾರ್ವತಿ ಬೆಟ್ಟಕ್ಕೂ ಅರ್ಧ ರಾತ್ರಿಗೂ ಕಡಿಮೆಯ ಹಾದಿ. ವಿಜಯದೇವರಾಜನು ತುಂಬಾ ಧರ್ಮಿಷ್ಠ ! ವಿಜಯದೇವನಿಗೆ ಸಿಂಹಾಸನವನ್ನೇರಲು ಅನುರೂಪ

ಕುಮಾರರಾಜನೆಂಬ ರಾಜಕುಮಾರನಿದ್ದನು. ತನ್ನಂತೆ ಯುವರಾಜನು ಧರ್ಮ ದಿಂದ ರಾಜ್ಯವಾಳಬೇಕೆಂದು ವಿಜಯದೇವನು ಮಗನಿಗೆ ಒಳ್ಳೇ ರಾಜಗುರುವಿನಿಂದ ಶಿಕ್ಷಣವನ್ನು ಕೊಡಿಸಿದನು. ವಿಜಯದೇವನು ನ್ಯಾಯದಿಂದ ರಾಜ್ಯವಾಳಿ, ರಾಜ್ಯದ ಪ್ರಜೆಗಳನ್ನು ಸಂತುಷ್ಟವಡಿಸಿ, ಭಾಂಡಾರದ ತುಂಬಾ ಅಪಾರ ಸಂಪತ್ತನ್ನು ಸಂಗ್ರಹಿಸಿದ್ದನು. ಅನೇಕ ತಲೆಮಾರುಗಳಿಂದಲೂ ಈ ವಂಶದ ರಾಜ್ಯವು ಸುಖ–ಸಮಾಧಾನಗಳ ತವರುಮನೆಯಾಗಿತ್ತು. ಪಿತನ ಮನಸ್ಸನ್ನು ಅರಿತು ಪುತ್ರನು ಕೂಡ ಯೋಗ್ಯವಾಗಿಯೇ, ದಿನದಿನಕ್ಕೂ ಬೆಳೆದು, ರಾಜ್ಯಸೂತ್ರಗಳ ಅರಿವನ್ನು ಮಾಡಿಕೊಂಡನು. ಕುಮಾರರಾಜನು ಇಪ್ಪತ್ತೊಂದರ ಹೊಸ್ತಿಲಲ್ಲಿ ಕಾಲಿಕ್ಕಿದಾಗ, ತಂದೆ ನೆರೆಯ ರಾಜ್ಯದ ರಾಜಕುಮಾರಿಯನ್ನು ತಂದು ಮದುವೆ ಮಾಡಿದನು.

ನೇತ್ರಾವತೀ ಯುವರಾಜ್ಞಿಯು ಯುವರಾಜನಿಗೆ ತಕ್ಕ ಪತ್ನಿಯೆಂದು ನೋಡಿದವರೆಲ್ಲರೂ ಹೇಳುವಷ್ಟು ಅನುರೂಪಳಿದ್ದಳು. ವಿಜಯದೇವನ ವಂಶದಂತೆ ಬಹು ಬಲಿಷ್ಠ ಮತ್ತು ಧರ್ಮಿಷ್ಠ ರಾಜವಂಶದ ಕುಮಾರಿಯಿದ್ದಳು. ತನ್ನ ರಾಜ್ಯದ ಪರಂಪರೆಯನ್ನು ತನ್ನ ಸೊಸೆಯು ಮುಂದಕ್ಕೆ ನಡೆಯಿಸಿಕೊಂಡು ಹೋಗುವ ಲಕ್ಷಣಗಳಿವೆ—ಎಂಬುದನ್ನು, ಬಂದ ಕೆಲವೇ ದಿನಗಳಲ್ಲಿ ವಿಜಯದೇವನು ಕಂಡುಕೊಂಡು ಸಂತೋಷಪಟ್ಟನು. ಮದುವೆಯಾದ ಮೇಲೆ ಮಗ ಮತ್ತು ಸೊಸೆ ಇಬ್ಬರನ್ನೂ ಕುಳ್ಳಿರಿಸಿಕೊಂಡು, ರಾಜ್ಯದ ಒಂದೊಂದೇ ಸೂಕ್ಷ್ಮ ಕಾರ್ಯಕಲಾಪಗಳ ಪರಿಚಯ ಮಾಡಿಕೊಡಲು ವಿಜಯದೇವನು ಪ್ರಾರಂಭಿಸಿದನು.

ಮದುವೆಯಾದ ಮೇಲೆ ಕುಮಾರರಾಜನು ಹೆಚ್ಚು ಸಮಯವನ್ನು ನೇತ್ರಾವತಿಯ ಬಳಿಯಲ್ಲಿಯೇ ಕಳೆಯುವುದು ವಿಜಯದೇವನ ಮನಸ್ಸಿಗೆ ಅಷ್ಟು ಹಿಡಿಸಲಿಲ್ಲ. ಹೊಸದಾಗಿ ಮದುವೆಯಾದುದರಿಂದ ಸ್ವಾಭಾವಿಕವಾಗಿ ಆ ರೀತಿ ಹೆಂಡತಿಯಲ್ಲಿ ಅನುರಕ್ತನಾಗುವುದು ಸಹಜವೆಂದು ಭಾವಿಸಿದನು. ಮಗನ ಮದುವೆಯಾಗಿ ಎರಡು ಮೂರು ವರುಷಗಳಲ್ಲಿಯೇ ವಿಜಯದೇವನು ಇಹಲೋಕ ಯಾತ್ರೆಯನ್ನು ಪೂರಯಿಸಿದನು. ರಾಜ್ಯದ ಪೂರ್ಣ ಭಾರವೆಲ್ಲವೂ ಕುಮಾರರಾಜನ ಮೇಲೆ ಬಿದ್ದಿತು. ಯೋಗ್ಯ ರೀತಿಯಿಂದ ರಾಜ್ಯ

ವಾಳಬೇಕೆಂಬುದೇ ವಿಜಯದೇವನು ಅವಸಾನ ಕಾಲದಲ್ಲಿ ಹೇಳಿದ ಮಾತು. ತಂದೆಯಿರುವಾಗಲೇ ತಂದೆಯ ಗುಣಗಳನ್ನು ನೋಡಿ ತಿಳಿದುಕೊಂಡು ತನ್ನಲ್ಲಿ ಅಳವಡಿಸಿಕೊಂಡು ಸಿದ್ಧನಾಗಿದ್ದ ಕುಮಾರರಾಜನಿಗೆ ರಾಜ್ಯವನ್ನು ನಡೆಯಿಸುವುದು ಅಷ್ಟು ಕಠಿಣವೆನಿಸಲಿಲ್ಲ. ನೇತ್ರಾವತಿಗೆ ತಕ್ಕುದಾದ ಶಿಕ್ಷಣವನ್ನು ಅವಳ ತಂದೆ ಕೊಡಿಸಿದ್ದರಿಂದ ಅವಳು ಮಂತ್ರಿಯ ಅರ್ಧ ಕಾರ್ಯವನ್ನು ಮಾಡುತ್ತಿದ್ದಳು. ನೇತ್ರಾವತಿಗೆ ದೇವರ ಮೇಲೆ ತುಂಬಾ ಶ್ರದ್ಧೆ. ದಿವಸದ ಬಹುಭಾಗವನ್ನು ದೇವರ ಸಾನ್ನಿಧ್ಯದಲ್ಲಿ ಕಳೆಯುತ್ತಿದ್ದಳು. ಯಾರಿಗೂ ಅನ್ಯಾಯವಾಗದಂತೆ ರಾಜ್ಯವನ್ನು ಆಳಬೇಕೆಂದು ಕುಮಾರರಾಜನಿಗೆ ಮೇಲಿಂದ ಮೇಲೆ ಹೇಳುತ್ತಿದ್ದಳು.

ಶಿವಪಾರ್ವತಿ ಬೆಟ್ಟದ ಮೇಲಿನ ಶಿವನು ಆ ರಾಜರ ಕುಲದೇವರು. ಪ್ರತಿ ವರುಷವೂ ಅಲ್ಲಿ ಜಾತ್ರೆ ನೆರೆಯುತ್ತಿತ್ತು. ರಾಜ್ಯದ ದೊರೆಯು ಜಾತ್ರೆಗೆ ಹೋಗಿ, ಅಂದು ಶಿವನನ್ನು ಅಭಿಷೇಕ ಮಾಡುವುದು ಸಂಪ್ರದಾಯ. ದೇವರ ಸೇವೆಯೆಂದು ಬೆಸ್ತರ ಹೆಣ್ಣುಮಕ್ಕಳು ಶಿವನ ಮೂರ್ತಿಯೆದುರು ಜಾತ್ರೆಯ ಕಾಲಕ್ಕೆ ದೊರೆಗಳ ಸಮ್ಮುಖದಲ್ಲಿ ನೃತ್ಯಮಾಡುತ್ತಿದ್ದರು. ನೃತ್ಯ, ಗ್ರಾಮ್ಯ ಗೀತ, ಕತೆ ಹೇಳುವುದು ಮೊದಲಾದ ಜಾನಪದ ಕಲೆಗಳ ಪ್ರದರ್ಶನವು ಅಲ್ಲಿ ನಡೆಯುತ್ತಿತ್ತು. ಜಾನಪದ ಕಲೆಗಳನ್ನು ಪ್ರದರ್ಶಿಸಿದವರನ್ನು ದೊರೆಯು ಸನ್ಮಾನಿಸುವುದು ವಾಡಿಕೆ. ಅವರವರ ಪ್ರದರ್ಶನಕ್ಕೆ ಉಚಿತವಾದ ರೀತಿಯಲ್ಲಿ ಪಾರಿತೋಷಕವನ್ನು ಕೊಡುತ್ತಿದ್ದರು. ವಿಜಯದೇವನು ತೀರಿದ ಮೇಲೆ ಎರಡು ಮೂರು ವರ್ಷ ಜಾತ್ರೆಯನ್ನೇ ಮಾಡಿರಲಿಲ್ಲ. ಈ ವರುಷ ಅದು ನಡೆಯಲಿರುವುದನ್ನು ಕೇಳಿ, ಪ್ರಜೆಗಳಿಗೆ ಸಂತೋಷವೆನಿಸಿತು. ದೊರೆಗಳು ಮಹಾರಾಣೀ ಸಮೇತ ಜಾತ್ರೆಗೆ ದರ್ಶನವನ್ನೀಯುವರೆಂದು ಜಾತ್ರೆಯ ಸಿದ್ಧತೆಗಳು ಭರದಿಂದ ಸಾಗಿದ್ದುವು. ಬೆಟ್ಟದ ಕೆಳಗಿನ ಗ್ರಾಮದ ಬೆಸ್ತರು ತಮ್ಮ ಕಲಾಪ್ರದರ್ಶನಕ್ಕೆ ತಕ್ಕುದಾದ ಸಿದ್ಧತೆಗಳನ್ನು ಮಾಡಿದರು.

ಈ ಸಲದ ಜಾತ್ರೆಯ ವೈಶಿಷ್ಟ್ಯವೆಂದರೆ, ಮೀನುಗಾರ ಸಂಜೆಯ ನಯನ ಮನೋಹರ ನೃತ್ಯ! ಸಂಜೆಯ ಹೆಸರು ಸಂಜೀವಿನಿ. ತಂದೆಯನ್ನು ಕಳೆದುಕೊಂಡು ಅಜ್ಜನ ಪೋಷಣೆಯಲ್ಲಿಯೇ ಬೆಳೆದ ಸಂಜೀವಿನಿಗೆ, ಪ್ರೀತಿಗೆಂದು

ಅವರಜ್ಜನು ಸಂಜಿಯೆಂದು ಕರೆಯುತ್ತಿದ್ದನು. ಸಂಜಿಯು ನಿಜಕ್ಕೂ ರಾಜ ಕುಮಾರಿಯಾಗಿ ಹುಟ್ಟಬೇಕಿತ್ತೆಂದು ಅವಳಜ್ಜನು ಅವಳ ಸೌಂದರ್ಯವನ್ನು ಕುರಿತು ಪ್ರಶಂಸನೆಯ ಮಾತುಗಳನ್ನಾಡುತ್ತಿದ್ದನು. ಅಮೃತಶಿಲಾವಿಗ್ರಹ ದಂತೆ ಕೆತ್ತಿದ ದೇಹರಚನೆ, ನಸುಗೆಂಪಿನಿಂದ ಮಿಶ್ರಿತವಾದ ಗೌರವರ್ಣದ ದೇಹ, ಸಂಪಿಗೆಯ ಪ್ರತಿರೂಪವೆನಿಸುವ ನಾಶಿಕ, ಕಪ್ಪುವರ್ಣದ ವಿಶಾಲ ಕೇಶರಾಶಿ! ಒಮ್ಮೆ ನೋಡಿದರೆ ತೃಪ್ತಿಯೆನಿಸದಷ್ಟು ಸುಂದರಳಿದ್ದಳು ಸಂಜಿ! ಅವಳ ನಾಶಿಕದಲ್ಲಿ ಒಂದು ಮೋಹಕತೆಯಿತ್ತು. ಇಪ್ಪತ್ತರ ತಾರುಣ್ಯದಲ್ಲಿದ್ದ ಸಂಜಿಯ ಸೌಂದರ್ಯಕ್ಕೆ ಮಾರುಹೋಗಿ ಬೆರಳನ್ನು ಸುಟ್ಟುಕೊಂಡು ಜೀವನ ವನ್ನೇ ಹಾಳು ಮಾಡಿಕೊಂಡ ತರುಣ ಮೀಸುಗಾರರು ಅನೇಕರು! ಸುರ ಸುಂದರಿ ಸಂಜಿಯ ನೃತ್ಯವು ಈ ಸಲ ಶಿವನೆದುರು ಜಾತ್ರೆಯ ಕಾಲದಲ್ಲಿ ಆಗು ವುದೆಂದು ಕೇಳಿ ಜಾತ್ರೆಗೆ ಹೆಚ್ಚಿನ ಜನರು ಬರತೊಡಗಿದರು.

ಬೆಟ್ಟವೆಲ್ಲವೂ ಹಸುರು ಚಿಗುರಿನಿಂದ ನಗುತ್ತಿತ್ತು. ಬೆಟ್ಟದ ಬದಿಯ ನದಿ ನಿಧಾನವಾಗಿ ಹರಿಯುತ್ತಿತ್ತು. ಜಾತ್ರೆಯ ದಿನದಂದು ಪೂರ್ವ ದಿಗಂತ ದಲ್ಲಿ ರವಿಯು ಉದಯಿಸಿದಾಗ, ಬೆಟ್ಟಕ್ಕೆ ಕಣ್ಣು ಬಂದಿತು. ಅಂದು ಮಹಾ ಸಾಗರವೇ ಕೆಳಗಿನಿಂದ ಮೇಲಕ್ಕೆ ಏರಿ ಬರುವಂತೆ ಕಾಣುತ್ತಿತ್ತು. ಯಥಾ ರೀತಿ ಶಿವನಿಗೆ ಪೂಜೆ, ಅಭಿಷೇಕ, ನೈವೇದ್ಯಗಳಾದವು ಕುಮಾರರಾಜರು ಸ್ವಹಸ್ತಗಳಿಂದ ಶಿವನಿಗೆ ಕನಕಾಭಿಷೇಕವನ್ನು ಮಾಡಿದರು. ನೇತ್ರಾವತೀ ಮಹಾರಾಜ್ಞಿಯವರು ನೆರೆದಿದ್ದ ಸುಮಂಗಲೆಯರಿಗೆಲ್ಲ ತೆಂಗಿನಕಾಯಿಯ ಬಾಗಿ ನವನ್ನೂ ಸುವರ್ಣದ ನಾಣ್ಯಗಳ ದಕ್ಷಿಣೆಯನ್ನೂ ಕೊಡಿಸಿದರು. ಈಸಲದ ಜಾತ್ರೆಗೆ ಬಂದ ಆಗಂತುಕರೆಲ್ಲರಿಗೂ ಸಂತೋಷವಾಗಿತ್ತು. ದೊರೆಗಳು ದಾನದ ತಮ್ಮ ಕೈಯನ್ನು ತೆರೆದೇ ಇಟ್ಟಿದ್ದರು. ಅಂದು ಸಂಜೆ, ಶಿವನ ದೇವಾಲಯದ ಪ್ರಾಂಗಣದಲ್ಲಿ ಸಂಜಿಯ ನೃತ್ಯವಿತ್ತು. ಸಂಜಿಯ ನೃತ್ಯದ ಮೊದಲು ಅನೇಕರು ಜಾನಪದಗೀತಗಳನ್ನು ಹಾಡಿ, ಬಂದವರನ್ನು ತಣಿಸಿದರು. ವಿಜಯದೇವನ ಕಾಲದಲ್ಲಿ ನೃತ್ಯಮಾಡಿ, ಮೆಚ್ಚುಗೆಯೆಂದು ಅಮೂಲ್ಯವಾದ ಪೀತಾಂಬರವನ್ನು ಸಂಜಿಯ ತಾಯಿಯು ದೊರಕಿಸಿದ್ದಳು. ಆದೇ ಪೀತಾಂಬರ ವನ್ನು ಉಟ್ಟು ಸಂಜಿಯು ಇಂದು ನೃತ್ಯಕ್ಕೆ ಬಂದಿದ್ದಳು.

ಸಂಜೆಯು ಮಿಂಚಿನವೇಗದಿಂದ ಬಂದು ಶಿವನಿಗೂ ಅನಂತರ ಕುಮಾರ ರಾಜ–ನೇತ್ರಾವತಿಯರಿಗೂ ನಮಸ್ಕಾರ ಮಾಡಿ ನೃತ್ಯವನ್ನು ಪ್ರಾರಂಭಿಸಿದಳು. ಗ್ರಾಮ್ಯಗತಿಯ ತಾಳ ಮದ್ದಳೆಗಳ ಹಿಮ್ಮೇಳದಲ್ಲಿ, ಜಾನಪದ ಸುಮಧುರ ಸಂಗೀತದ ಆಲಾಪನೆಯಲ್ಲಿ, ಸಂಜೆಯು ತನ್ನ ಕುಣಿತವನ್ನು ಪ್ರಾರಂಭಿಸಿದಳು. ನಿಸರ್ಗದತ್ತ ಸೌಂದರ್ಯಕ್ಕೆ ಅವಳ ಇಂದಿನ ವೇಷ ಭೂಷಣಗಳು ಒಳ್ಳೇ ಶೋಭೆಯನ್ನು ತಂದಿದ್ದುವು. ಸಂಜೆಯ ಮುಖಲಕ್ಷಣವನ್ನು ನೋಡಿ ಕುಮಾರರಾಜರಿಗೆ ಅಚ್ಚರಿಯೆನಿಸಿತು. ಬೆಸ್ತರ ಜಾತಿಯಲ್ಲಿ ಅಷ್ಟು ಸುಂದರ ವಾದ ಹೆಣ್ಣು ಜನ್ಮವೆತ್ತುವುದೆಂಬುದನ್ನು ಅವರು ಕೇಳಿರಲಿಲ್ಲ ಕೂಡ. ದೊರೆ ಗಳು ತಮ್ಮ ಪಕ್ಕದಲ್ಲಿ ಕುಳಿತಿದ್ದ ನೇತ್ರಾವತಿಯ ಸೌಂದರ್ಯವನ್ನೂ ಹಾಗು ಎದುರು ನರ್ತಿಸುತ್ತಿದ್ದ ಸಂಜೆಯ ಸೌಂದರ್ಯವನ್ನೂ ತಮ್ಮ ರಸಿಕತೆಯ ಪರ ಡೆಯಲ್ಲಿ ತೂಗಿ, ಸಂಜೆಯು ತಮ್ಮ ಧರ್ಮಪತ್ನಿಗಿಂತ ಸಹಸ್ರಾರು ಪಟ್ಟು ರೂಪ ವತಿಯೆಂಬುದನ್ನು ನಿರ್ಧರಿಸಿದರು. ಸಂಜೆಯ ಸೌಂದರ್ಯದಿಂದ ನೇತ್ರಾ ವತಿಗೆ ಕಣ್ಣು ಕುಕ್ಕಿದಂತಾಯಿತು. ತಾನು ಕಲಿತ ನೃತ್ಯಗಳನ್ನು ಒಂದರ ಮೇಲೊಂದು ಮಾಡಿ ಸಂಜೆ ಶಿವಾಲಯದಲ್ಲಿ ನೆರೆದಿದ್ದ ಜನರನ್ನೆಲ್ಲಾ ಮುಗ್ಧ ರನ್ನಾಗಿ ಮಾಡಿದಳು. ಕುಮಾರರಾಜರಿಗೆ ಬಹು ಸಂತೋಷವಾಯಿತು. ನೃತ್ಯವು ನಡೆದಿದ್ದಾಗ ದೊರೆಗಳ ಕಣ್ಣುಗಳು ಸಂಜೆಯ ಮೇಲೆ ನೆಟ್ಟದ್ದನ್ನು ಸೂಕ್ಷ್ಮವಾಗಿ ನೇತ್ರಾವತಿಯು ನೋಡಿದಳು. ಅವಳಿಗೇಕೋ ದೊರೆಯ ದೃಷ್ಟಿಯಲ್ಲಿ ದೋಷವಿದೆಯೆಂದು ಭಾಸವಾಯಿತು. ನೃತ್ಯವನ್ನು ಮೆಚ್ಚಿ ದೊರೆ ಗಳು ತಾವೇ ಎದ್ದು, ಸಂಜೆಯ ಕೈಗೆ ತಮ್ಮ ಬೆರಳಿನಲ್ಲಿದ್ದ ಅಮೂಲ್ಯವಾದ ವಜ್ರದುಂಗುರವನ್ನು ಇರಿಸಿ ಬಂದರು. ದೊರೆಗಳ ಆನಂದೋತ್ಸಾಹಗಳು ನೆರೆ ದವರನ್ನು ಪುಲಕಿತಗೊಳಿಸಿದುವು. ಸಂಜೆಯ ಕೈಯನ್ನು ಮುಟ್ಟಿ ಬೆರಳಿಗೆ ವಜ್ರದುಂಗುರವನ್ನು ಹಾಕಿದುದು ನೇತ್ರಾವತಿಯ ಮನಸ್ಸಿಗೇಕೋ ಅಷ್ಟು ಹಿಡಿಸಲಿಲ್ಲ.

ಜಾತ್ರೆ ಮುಗಿದ ಮೇಲೆ ವಿಶ್ರಾಂತಿಗೆಂದು ಒಂದೆರಡು ದಿವಸಗಳ ವರೆಗೆ ದೊರೆಗಳು ನಿಂತರು. ಬೆಟ್ಟದ ಮೇಲೆ ಶಿವನೊಬ್ಬನೇ ಇರುವುದರಿಂದ, ಅವನ ಆರಯಿಕೆ ಮಾಡಲು ನಾವೇಕೆ ಒಂದು ಪಾರ್ವತಿಯ ದೇವಾಲಯವನ್ನು ನಿರ್ಮಿಸ ಬಾರದೆಂದು ನೇತ್ರಾವತಿ ಪತಿಯನ್ನು ಕೇಳಿದಳು. ಅಲ್ಲದೆ ಮಕ್ಕಳಿಲ್ಲದ ತಮಗೆ

ಪಾರ್ವತಿಯ ದೇವಾಲಯವನ್ನು ಕಟ್ಟಿಸಿದರೆ ಮಕ್ಕಳಾಗುವುದು ಖಂಡಿತವೆಂದು ಹೇಳಿದಳು. ಕುಮಾರರಾಜನಿಗೂ ಹೆಂಡತಿಯ ಮಾತು ಸರಿಯೆನಿಸಿತು. ಬೆಟ್ಟದ ಕೆಳಗೆ ನದಿಯ ಪಾತ್ರದ ಸಮೀಪದಲ್ಲಿ ಒಂದು ಸುಂದರವಾದ ಪಾರ್ವತಿಯ ದೇವಾಲಯವನ್ನು ಕಟ್ಟಿಸಲು ದೊರೆಯು ಆಜ್ಞೆ ಮಾಡಿದನು. ಶಿವನ ದೇವಾಲಯದಿಂದ ಕೂಗಳತೆಯೊಂದರಲ್ಲಿ, ಶಿವನಿಗೆ ಇದಿರಾಗಿ ಒಂದು ಪಾರ್ವತಿಯ ದೇವಾಲಯವು ಸಿದ್ಧವಾಗುವ ರೂಪರೇಷೆಗಳು ನಿರ್ಮಿತವಾದುವು. ದೊರೆಗಳು ರಾಜಧಾನಿಗೆ ಹೊರಟು ನಿಂತಾಗ ಶಿವಗಂಗೆಯ ಗ್ರಾಮವೇ ಅವರನ್ನು ಬೀಳ್ಕೊಡಲು ನೆರೆದಿತ್ತು. ದೊರೆಗಳು ಸಂಜಿಯ ಅಜ್ಜನನ್ನು ಕರೆಯಿಸಿ, ಸಂಜಿಗೆ ಬೆಲೆಯುಳ್ಳ ವಸ್ತ್ರಾಭರಣಗಳನ್ನು ಪಾರಿತೋಷಕವೆಂದು ಕೊಟ್ಟರು. ದೊರೆಗಳ ರಥವು ಸಿದ್ಧವಾಯಿತು. ರಥಿಕನು ಅಶ್ವಗಳಿಗೆ ಮುಂದಕ್ಕೆ ತೆರಳಲು ಸಂಜ್ಞೆ ಮಾಡಿದ ಕೂಡಲೆ, ಎಲ್ಲರೂ ದೊರೆಗಳಿಗೂ ರಾಣಿ ನೇತ್ರಾವತಿಗೂ ನಮಸ್ಕಾರ ಮಾಡಿದರು. ದೊರೆಗಳ ಕಣ್ಣುಗಳು ಗುಂಪಿನಲ್ಲಿದ್ದ ಸಂಜಿಯ ಮೇಲೆ ನಟ್ಟುಹೋಗಿರುವುವೆಂಬುದನ್ನು ಬದಿಯಲ್ಲಿದ್ದ ನೇತ್ರಾವತಿ ನೋಡಿದಳು. ಅದೇಕೋ ಅವಳ ಬಲಗಣ್ಣು ಹಾರಿತು. ರಥವು ಮುಂದಕ್ಕೆ ಚಲಿಸಿತು. ಶಿವಗಂಗಾ ಗ್ರಾಮದವರು ಮರಳಿ ತಮ್ಮ ಗುಡಿಸಲುಗಳಿಗೆ ಹೋದರು. ಪ್ರಾಂಜಲ ಮನಸ್ಸಿನ ಸಂಜಿಗೆ ಇದಾವುದರ ಕಲ್ಪನೆಯೇ ಇದ್ದಿರಲಿಲ್ಲ !

ಜಾತ್ರೆಯಾಗಿ ಒಂದು ವರುಷ ಕಳೆಯಿತು. ಅಷ್ಟರಲ್ಲಿ ಬಹು ಸುಂದರವಾದ ಪಾರ್ವತಿಯ ದೇವಾಲಯವು ಸಿದ್ಧವಾಗಿತ್ತು. ಮೀನಗಾರರೆಲ್ಲರೂ ಈ ದೇವಾಲಯಕ್ಕೆ ಹೆಚ್ಚು ಬರುತ್ತಿದ್ದರು. ಭಕ್ತರ ಗುಂಪಿನಲ್ಲಿ ಸಂಜಿಯೂ ಒಬ್ಬಳಾಗಿದ್ದಳು. ರಾಣೀ ನೇತ್ರಾವತಿಯವರು ಪಾರ್ವತಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ಯಥೇಚ್ಛವಾಗಿ ದಾನ ಮಾಡಿದರು. ದೊರೆಯು ಪತ್ನಿಯ ಯಾವ ಮಾತನ್ನೂ ಅಲ್ಲಗಳೆಯಲಿಲ್ಲ. ಪಾರ್ವತಿಯ ದೇವಾಲಯದ ಭವ್ಯತೆಗೆ ತಕ್ಕಂತೆ ನೇತ್ರಾವತೀ ರಾಣಿಯವರ ಮನಸ್ಸು ವಿಶಾಲವಿದ್ದುದರಿಂದ ಒಳ್ಳೇ ವಿಜೃಂಭಣೆಯಿಂದ ಉತ್ಸವವು ಕೊನೆಗೊಂಡಿತು.

ಈ ಸಲ ಜಾತ್ರೆಗೆ ಕುಮಾರರಾಜ ದೊರೆಗಳೊಬ್ಬರೇ ಬಂದರು. ಯಾವುದೋ ಕಾರಣದಿಂದ ನೇತ್ರಾವತಿಯವರಿಗೆ ಬರಲಾಗಲಿಲ್ಲ. ಈ ಸಲವೂ

ಸಂಜೆಯ ನೃತ್ಯವಿತ್ತು. ರಾಜನಲ್ಲಿ ಕಳೆದ ಸಲ ಚಿಗುರಿದ ಮೋಹವು ಈಗ ಕುಡಿಯಿಟ್ಟಿತು. ಅವರ ಮನಸ್ಸು ಅವಳನ್ನು ಬಯಸಿತು. ನೃತ್ಯವು ಕೊನೆ ಗಂಡ ಮೇಲೆ ದೊರೆಗಳು ಸಂಜೆಗೆ ತಮ್ಮ ಬಿಡಾರಕ್ಕೆ ಬರಲು ತಿಳಿಸಿದರು. ಸಂಜೆಯ ಅಜ್ಜನು ದೊರೆಗಳು ಉಡುಗೊರೆ ಮತ್ತು ವಸ್ತ್ರಗಳನ್ನು ಕೊಡಬಹು ದೆಂದು ಭಾವಿಸಿ, ಅಂದು ರಾತ್ರಿ ಅವಳೊಬ್ಬಳನ್ನೇ ಕಳುಹಿದನು. ಸಂಜೆಯು ಅಂಜುತ್ತಂಜುತ್ತ ಒಳಗೆ ತೆರಳಿದಳು. ದೊರೆಗಳ ಬಳಿ ಮಾತನಾಡಲು ಅವ ಳಿಗೆ ಅತಿ ಸಂಕೋಚವೆನಿಸಿತು. ಕುಮಾರರಾಜರು ಮುಗುಳುನಗೆ ನಗುತ್ತ ಅವಳಿಗೆ ಆಸನದ ಮೇಲೆ ಕೂಡಲು ಬಿನ್ನವಿಸಿದರು. ಅವಳ ನೃತ್ಯವನ್ನು ತುಂಬ ಹೊಗಳಿದರು. ಹೊಗಳಿ ಅವಳ ಮನೆತನದ ಕೆಲ ವಿಷಯಗಳನ್ನು ಕೇಳಿ, ಸೂಕ್ಷ್ಮವಾಗಿ ತಮ್ಮ ಮನೋಗತವನ್ನು ತಿಳಿಸಿದರು. ಸಂಜೆಗೆ ದೊರೆ ಗಳ ಮಾತನ್ನು ಕೇಳಿ ಕ್ಷಣಕಾಲ ಆಶ್ಚರ್ಯವೆನಿಸಿತು. ಆದರೆ ಧರ್ಮದ ಕಟ್ಟಿಗೆ ಬಿದ್ದ ಅವಳ ಮನಸ್ಸು ಅದಕ್ಕೆ ಒಪ್ಪಲಿಲ್ಲ. ದೊರೆಗಳನ್ನು ಧಿಕ್ಕರಿಸಿ ಅಲ್ಲಿಂದ ತೆರಳಿದರೆ ಅವರ ಅವಕೃಪೆಗೆ ಪಾತ್ರಳಾಗುವುದು ಖಂಡಿತವೆನಿಸಿತು. ಅವಳಿಗೂ ತಾರುಣ್ಯ! ಎದುರು ಸುಂದರನಾದ ಐಶ್ವರ್ಯಪೂರ್ಣನಾದ ರಾಜನು ಬಯಸಿ ಬೇಡಿಕೊಳ್ಳುತ್ತಿರುವಾಗ, ಯಾವ ಹೆಣ್ಣು ಅದನ್ನು ಧಿಕ್ಕರಿ ಸೀತು ? ಆದರೆ ಆ ರೀತಿ ಅನ್ಯಾಯ ಮತ್ತು ಅಧರ್ಮದ ರೀತಿಯಲ್ಲಿ ನಡೆದು ಕೊಳ್ಳಲು ಸಂಜೆಗೆ ಮನಸ್ಸಾಗಲಿಲ್ಲ. ಕೆಳಕ್ಕೆ ಮುಖ ಮಾಡಿ ಉತ್ತರ ಕೊಡದೆ ಮೌನಿಯಾದಳು.

ಈ ಮೌನವೇ ಅವಳ ಒಪ್ಪಿಗೆಯೆಂದು ಭಾವಿಸಿ ದೊರೆಗಳು, ಸಂಜೆಯ ಕೈಹಿಡಿದೆಳೆದು, ತಮ್ಮ ಮನದ ಹಸಿವನ್ನು ಹಿಂಗಿಸಿಕೊಂಡರು. ಸಂಜೆಗೆ ಮಾತನಾಡಲು ಆಸ್ಪದವೇ ಇದ್ದಿರಲಿಲ್ಲ. ದೊರೆಗಳಿಗೆ ತುಂಬಾ ಅಂಜಿದ್ದಳು. ಸಂಜೆಯನ್ನು ಕಳಿಸುವಾಗ ಕುಮಾರರಾಜರು ವಸ್ತ್ರ ಭೂಷಣ ಹಾಗೂ ಕನಕದ ನಾಣ್ಯಗಳನ್ನು ಕೊಟ್ಟಿದ್ದರು. ಸಂಜೆಯು ಒಬ್ಬ ಸೇವಕನ ಹಿಂದೆ ಆ ಒಡವೆ–ವಸ್ತ್ರಗಳೊಂದಿಗೆ ಬಂದುದನ್ನು ನೋಡಿ ಸಂಜೆಯ ಅಜ್ಜನಿಗೆ ತುಂಬ ಸಂತೋಷ ವೆನಿಸಿತು. ಆ ಎಲ್ಲ ಪದಾರ್ಥಗಳನ್ನು ನೋಡಿದ ಮೇಲಂತೂ ಅವನಿಗೆ ಬಹು ಆನಂದವಾಯಿತು. ಆದರೆ ಸಂಜೆಯ ಮುಖದ ಮೇಲೆ ಅಷ್ಟು ಗೆಲವು ಕಾಣ

ಲಿಲ್ಲ. ದಣಿದಿರಬಹುದೆಂದು ಭಾವಿಸಿ ಅವಳಜ್ಜನು ಅವಳ ಬೆನ್ನಮೇಲೆ ಮೆತ್ತಗೆ ಕೈಯಾಡಿಸಿ, ಅವಳಿಗೆ ವಿಶ್ರಮಿಸಲು ತಿಳಿಸಿದನು. ಅವನಿಗೆ ಸಂಜೆಯು ತಂದ ಅಪಾರ ಸಂಪತ್ತಿನಿಂದ ಅಮಿತವಾದ ಆನಂದವಾಗಿತ್ತು. ರಾತ್ರಿಯಲ್ಲಿ ಮಲಗಿ ಮುಂಜಾನೆ ಎದ್ದಾಗ, ಸಂಜೆಯ ತಲೆದಿಂಬೆಲ್ಲಾ ತೊಯ್ದುಹೋಗಿತ್ತು. ಅವಳ ಮುಖ ನಿಸ್ತೇಜವಾಗಿತ್ತು. ಸಂಜೆಯು ನಿತ್ಯದಂತೆ ಚಟುವಟಿಕೆಯನ್ನು ಮಾಡದಾಗಲು, ಅವಳಜ್ಜನಿಗೆ ಅದೇಕೋ ಸಂಜೆಯು ಒಂದು ರೀತಿಯಾಗಿ ದ್ದಾಳೆಂಬ ಎನಿಸಿತು. ಅವನಿಗೆ ಸಂಜೆಯ ಮನಸ್ಸಿನಲ್ಲಿ ನಡೆದ ಹೋರಾಟದ ಅರಿವೇ ಇದ್ದಿರಲಿಲ್ಲ. ತಾನು ಕಾಲು ಜಾರಿದೆನೆಂದು ಸಂಜೆಗೆ ಅತಿ ಕೆಡುಕೆನಿ ಸಿತು. ಮರಳಿ ಹೋಗುವ ಮುನ್ನ ದೊರೆಗಳು ಸಂಜೆಯನ್ನು ಮತ್ತೊಮ್ಮೆ ಏಕಾಂತದಲ್ಲಿ ಕಂಡರು.

ಕುಮಾರರಾಜರು ಜಾತ್ರೆ ಮುಗಿಸಿ ರಾಜಧಾನಿಗೆ ಹೋದರು. ಈ ಸಲ ಅವರು ನೇತ್ರಾವತಿಗೆ ಸಂಜೆಯ ಮಾತನ್ನೇ ಹೇಳಹತ್ತಿದರು. ತಮ್ಮ ರಾಜ ಧಾನಿಗೆ ಅವಳನ್ನೊಮ್ಮೆ ಕರೆಯಿಸಿ ನೃತ್ಯ ಮಾಡಿಸಬೇಕೆಂದು ಸೂಚಿಸಿದರು. ಆದರೆ ನೇತ್ರಾವತಿಯ ಮನಸ್ಸಿಗೆ ಅದು ಒಪ್ಪಿಗೆಯಾಗಲಿಲ್ಲ. ಅವಳಿಗೆ ದೊರೆ ಗಳು ಅವಳ ಮೇಲೆ ಅಷ್ಟು ಪ್ರೀತಿಯನ್ನು ತೋರಿಸುವುದು ಸರಿ ಎನಿಸಲಿಲ್ಲ. ತಾವು ಅಷ್ಟು ಸಂಜೆಯನ್ನು ಕರೆಯಲು ಒತ್ತಾಯ ಮಾಡಿದರೆ ನೇತ್ರಾವತಿಗೆ ಸಂಶಯವು ಎಲ್ಲಿ ಬರುವದೋ ಎಂದು ಅವರು ಸುಮ್ಮನಾಗಿ ಬಿಟ್ಟರು. ನಿತ್ಯದ ಕಾರ್ಯದಲ್ಲಿ ಸಿಲುಕಿದ ಮೇಲೆ ಸಂಜೆಯು ಮರೆತೇ ಹೋದಳು.

ಆ ವರ್ಷದ ವರ್ಷಋತು ಕೊನೆಗೊಳ್ಳುತ್ತ ಬಂದಿದ್ದರೂ ಕುಮಾರ ರಾಜರ ರಾಜ್ಯದಲ್ಲಿ ಮಳೆ ಒಂದು ಹನಿ ಬಿದ್ದಿರಲಿಲ್ಲ. ಮೇಘರಾಜನ ಅವಕೃಪೆ ಯಿಂದ ರಾಜ್ಯದ ತುಂಬಾ ವಿಮಂಚನೆಯುಂಟಾಯಿತು. ಆ ವಂಶದ ಇತಿ ಹಾಸದಲ್ಲಿಯೇ ಬರಗಾಲದ ಲಕ್ಷಣಗಳು ಕಾಣಹತ್ತಿದ್ದು ಇದು ಪ್ರಥಮ ಸಲ ವಾಗಿತ್ತು. ವರುಣದೇವನ ಮತ್ತು ಮೇಘರಾಜನ ಕೃಪೆಗಾಗಿ ಅಲ್ಲಲ್ಲಿ ಅಭಿ ಷೇಕ ನೈವೇದ್ಯ ಹಾಗೂ ಉಪಾಸನೆಗಳು ನಡೆದುವು. ಕುಮಾರರಾಜನಿಗೂ ತುಂಬಾ ಅಂಜಿಕೆಯೆನಿಸಿತು. ಭಾವಿಕಳಾದ ನೇತ್ರಾವತೀ ರಾಜ್ಞಿಗೆ ತಮ್ಮ ರಾಜ್ಯದಲ್ಲಿ ಅನ್ಯಾಯ ಹಾಗೂ ಅಧರ್ಮಗಳು ತಲೆಯೆತ್ತಹತ್ತಿವೆಯೆಂದು ಎನಿ

ಸಿತು. ತನ್ನ ಪತಿಯೇ ಅದೆಲ್ಲಿ ಕಾಲು ಜಾರಿ ಬಿದ್ದರೋ—ಎಂದು ನೇತ್ರಾ ವತಿಗೆ ಚಿಂತೆಯುಂಟಾಯಿತು. ಶಿವಪಾರ್ವತೀ ಗ್ರಾಮದಲ್ಲಿ ಮೊದಲೇ ಮಳೆ ಯಿಲ್ಲದ್ದಕ್ಕೆ ಹಾಹಾಕಾರವೆದ್ದಿತ್ತು.

ಅಂದು ಬಂದು ಮಲಗಿದ ಸಂಜೆಯ ಮುಖಲಕ್ಷಣಗಳು ಪ್ರತಿದಿನಕ್ಕೂ ಬದಲಾಗಹತ್ತಿದವು. ಅವಳು ಇಂದು ತುಂಬಿದ ಗರ್ಭಿಣಿ. ಗ್ರಾಮದಲ್ಲಿ ಈ ವಾರ್ತೆ ಕಾಳ್ಗಿಚ್ಚಿನಂತೆ ಹಬ್ಬಿತು. ಅವಳಜ್ಜನು ತನ್ನ ಮೊಮ್ಮಗಳ ಕತೆಯನ್ನು ಕೇಳಿ ಅದಕ್ಕೇನೂ ಮಾಡದಾದನು. ತಮ್ಮನ್ನು ಆಳಿ ನ್ಯಾಯವನ್ನು ದಯೆ ಪಾಲಿಸುವ ವ್ಯಕ್ತಿಯೇ ಈ ಅನ್ಯಾಯವನ್ನು ಮಾಡಿರುವಾಗ, ಯಾರಲ್ಲಿ ಅವನು ದೂರಿಕೊಳ್ಳಬೇಕು! ಸಂಜೆಯ ಅಜ್ಜನು ಈ ಸುದ್ದಿಯನ್ನು ಬೇರೆಯವರಲ್ಲಿ ಹೇಳಿದರೆ ಯಾರು ನಂಬಿಯಾರು? ದೊರೆಯ ತಲೆಯ ಮೇಲೆ ಸಂಜೆಯ ಬಸುರಿನ ದೋಷವನ್ನು ಇರಿಸಲು ಪ್ರಯತ್ನಿಸಿದರೆ, ಜನಕ್ಕೆ ನಂಬಿಗೆ ಹೇಗಾಗ ಬೇಕು?

ಒಂದು ಸುಂದರವಾದ ಗಂಡುಮಗುವಿಗೆ ಸಂಜೆಯು ಜನ್ಮವಿತ್ತಳು. ಸಂಜೆಯ ಗುಡಿಸಲು ಅವರ ಸಮಾಜದಿಂದ ಹೊರಗುಳಿಯಬೇಕಾಯಿತು. ಅವರು ಬಹಿಷ್ಕೃತರಾದರು. ಸಂಜೆಯು ಪಾರ್ವತಿಯಲ್ಲಿ ಆರಿಕೆ ಮಾಡಿ ಕೊಂಡಳು. ನಿತ್ಯವೂ ಅಳುತ್ತಲೇ ಸಾಗಿದಳು. ಅವಳಜ್ಜನು ತಾನಿರುವ ದಾಗಿ ಧೈರ್ಯ ಕೊಟ್ಟನು. ಆದರೆ ತನ್ನ ಪಾಪದ ಹೊರೆ ತನ್ನನ್ನು ಬಹುದಿವಸ ಬದುಕಿಸಲಾರದೆಂದು ಅವಳಿಗೆ ಎನಿಸಿತು. ಅಷ್ಟರಲ್ಲಿ ರಾಜ್ಯದಲ್ಲಿಯ ಮೇಘ ರಾಜನ ಅವಕೃಪೆಗೆ ಒಂದು ನರಬಲಿಯು ಬೇಕೆಂಬ ವಾರ್ತೆ ಹರಡಿತು. ಕುಲ ದೇವತೆ ಪಾರ್ವತಿ ಕೋಪಗೊಂಡಿದ್ದಾಳೆಂದೂ, ಅವಳಿಗೆ ನರಬಲಿ ಕೊಟ್ಟರೆ ಮಳೆ ಬರುವುದು ಖಂಡಿತವೆಂದೂ ಜ್ಯೋತಿಷಿಗಳು ಹೇಳಿದರು. ಆದರೆ ನರ ಬಲಿಗೆ ಸಿದ್ಧರಾಗುವರಾರು? ಸಂಜೆಯ ಕಿವಿಗೆ ಈ ವಾರ್ತೆ ಅದು ಹೇಗೋ ಬಿದ್ದಿತು. ತಾನೇಕೆ ತನ್ನ ದೇಹವನ್ನು ಅರ್ಪಿಸಿ ಲೋಕಕ್ಕೆ ಉಪಕಾರವನ್ನು ಮಾಡಬಾರದೆಂದು ಆಕೆ ಭಾವಿಸಿದಳು. ಹಡೆದು ಇಪ್ಪತ್ತು ದಿವಸಗಳಾದ ಮೇಲೆ ಒಂದು ದಿವಸ ಸರಿರಾತ್ರಿಯಲ್ಲಿ, ಮಲಗಿದ ರಾಜಪಿಂಡದ ಮಗುವನ್ನು ಅಗಲಲಾರದೆ ಅಗಲಿ, ಪಾರ್ವತಿಯ ದೇವಾಲಯಕ್ಕೆ ಬಂದಳು. ತಾನು ತಪ್ಪನ್ನು

ಎಸಗಿದ್ದಕ್ಕೆ ಪಶ್ಚಾತ್ತಾಪಗೊಂಡವಳಾಗಿ, ದೊರೆಯು ತನಗಿತ್ತ ವಜ್ರದುಂಗುರ ವನ್ನು ಪಾರ್ವತಿಯ ಉಡಿಯಲ್ಲಿ ಹಾಕಿ ಪಾರ್ವತಿಯನ್ನು ಪ್ರಾರ್ಥಿಸಿದಳು. ತನ್ನ ಮುಂದಿನ ಜನ್ಮದಲ್ಲಾದರೂ ಕುಮಾರರಾಜನೇ ಪತಿಯಾಗಿ ದೊರೆಯಲೆಂದು ಕೇಳಿಕೊಂಡು ಪಾರ್ವತಿಯ ಪಾದಗಳಿಗೆ ತನ್ನ ತಲೆಯನ್ನು ಜಜ್ಜಿಕೊಂಡು ಪ್ರಾಣತೆತ್ತಳು. ಪಾರ್ವತಿಯ ಪಾದಗಳು ರಕ್ತದ ಮಡುವಿನಲ್ಲಿ ನಿಂತಿದ್ದುವು.

ಮಿಂಚಿನ ವೇಗದಲ್ಲಿ ಮುಂಜಾನೆ ಈ ವಾರ್ತೆಯು ಗ್ರಾಮದಲ್ಲಿಯೂ ಹಾಗೂ ರಾಜಧಾನಿಯ ವರೆಗೂ ಹೋಯಿತು. ನರಬಲಿಗೆ ಆಹುತಿಯಾದ ವಳು ಸಂಜೆಯೆಂಬುದನ್ನು ಕೇಳಿ ದೊರೆಗೆ ಅತಿ ವಿಷಾದವೆನಿಸಿತು. ಅವಳ ಸಾವಿನ ಕಥೆ ಹಾಗೂ ಅದರ ಹಿಂದಿನ ಚಿತ್ರವನ್ನು ಅದಾರೋ ದೊರೆಗಳಿಗೆ ಹೇಳಿದಾಗ, ಅವರಿಗೆ ತಮ್ಮದೇ ಅನ್ಯಾಯವೆಂದು ಎನಿಸಿತು. ನೇತ್ರಾವತೀ ರಾಜ್ಞಿಯವರಿಗೆ ಸಂಜೆಯ ಕಥೆ ತಿಳಿಯಿತು. ತನ್ನ ಪತಿಯ ಅನ್ಯಾಯಕ್ಕೆ ಒಂದು ಬಡಜೀವಿಯು ಬಲಿಯಾಯಿತೆಂದು ಕೇಳಿ ಆಕೆ ವ್ಯಥೆಪಟ್ಟಳು. ಇನ್ನು ತನ್ನ ರಾಜ್ಯದ ಪುಣ್ಯವೇ ತೀರಿತೆಂದು ಭಾವಿಸಿದಳು. ಪ್ರಾಣಬಲಿಯಾದ ಮೂರೇ ದಿವಸಗಳಲ್ಲಿ ವರ್ಷಾಋತುವು ಪ್ರಾರಂಭವಾಯಿತು. ಮುಗಿಲು ಅದೆಲ್ಲಿ ಹರಿದಿದೆಯೋ ಎಂದು ಜನರಿಗೆ ತೋರಿತು. ಕುಮಾರರಾಜನ ರಾಜ್ಯ ವೆಲ್ಲ ಆನಂದಪುಲಕಿತವಾಯಿತು. ಶಿವಗಂಗೆ ಗ್ರಾಮದ ನದಿ ಏರಹತ್ತಿತು. ಆ ನದಿಯು ಅಷ್ಟು ಏರಿದ್ದನ್ನು ಯಾರೂ ಕಂಡಿರಲಿಲ್ಲ. ಅದರಿಂದ ಆ ನದಿಯು ಪಾತ್ರವೇ ಬದಲಿಸುವಷ್ಟು ಹೆದರಿಕೆ ಜನಕ್ಕಾಯಿತು. ನದಿಯು ಬೆಟ್ಟವನ್ನೇರಿತು. ಬೆಟ್ಟದಿಂದ ಕೆಳಕ್ಕೆ ಬಂದು ಪಾರ್ವತಿಯ ದೇವಾಲಯ ಮತ್ತು ಗ್ರಾಮ ವನ್ನು ಕೊಚ್ಚಿಕೊಂಡು ಹೋಗುವ ಅಂಜಿಕೆ ತೋರಿತು. ಶಿವನ ದೇವಾಲಯವನ್ನೇ ಕೊಚ್ಚಿಕೊಂಡು ಹೋಯಿತು. ಶಿವನೊಬ್ಬನೇ ಬಯಲಿನಲ್ಲಿ ನಿಂತನು.

ಆ ಗ್ರಾಮದವರು ನದಿಯಿಂದ ತಮ್ಮ ಸಂರಕ್ಷಣೆ ಮಾಡಲು ದೊರೆಗೆ ಕೇಳಿಕೊಂಡರು. ಕುಲದೇವರ ದೇವಾಲಯವು ನದಿಗೆ ತುತ್ತಾದುದರಿಂದ, ದೊರೆಗಳಿಗೆ ಮತ್ತು ನೇತ್ರಾವತಿದೇವಿಯವರಿಗೆ ಬಹು ವಿಷಾದವೆನಿಸಿತು. ಅಂದು ರಾತ್ರಿ ನೇತ್ರಾವತಿಯ ಶಯನಗೃಹಕ್ಕೆ ಕುಮಾರರಾಜರು ಬಂದರು.

ನೇತ್ರಾವತಿದೇವಿ ದೊರೆಗಳು ತಮ್ಮ ದೇಹವನ್ನು ಮುಟ್ಟಕೂಡದೆಂದು ನಿರಾಕರಿಸಿದರು. ವ್ಯರ್ಥವಾಗಿ ಒಂದು ಹೆಣ್ಣುಜೀವನದ ಭವಿಷ್ಯವನ್ನೇ ಹಾಳುಗೆಡವಿದ್ದಕ್ಕೆ ದೊರೆಗಳನ್ನು ರಾಣಿಯವರು ದೂಷಿಸಿದರು.

ಮರುದಿನ ಮಹಾರಾಣಿನೇತ್ರಾವತಿಯವರು ತಮ್ಮ ಕುಲದೇವರ ಬೆಟ್ಟದವರೆಗೂ ಹೋಗಿ ಅಲ್ಲಿಯ ಪ್ರಜೆಗಳ ಪರಿಸ್ಥಿತಿ ನೋಡಿ ಬರುವ ಮನೋಗತವನ್ನು ವ್ಯಕ್ತಪಡಿಸಿ ಅಲ್ಲಿಗೆ ಹೋದರು. ನದಿಯು ಇನ್ನೂ ಏರುತ್ತಲೇ ಇತ್ತು. ಅದು ಕಡಿದುಕೊಂಡು ಕೆಳಕ್ಕೆ ಬರುವ ಸಂಭವವಿತ್ತು. ಶಿವಾಲಯವಂತೂ ನೆಲಸಮವಾಗಿತ್ತು. ಇನ್ನು ಪಾರ್ವತಿಯ ದೇವಾಲಯವೂ ಹೋಗುವ ಭೀತಿಯಿತ್ತು. ಗ್ರಾಮಕ್ಕೆ ಬಂದು ಮೊದಲು ಸಂಜಿಯ ಗುಡಿಸಲಿಗೆ ಹೋಗಿ ಆ ಮಗುವನ್ನು ನೋಡಿದರು. ಮಗು ತನ್ನ ಪತಿಯನ್ನೇ ಹೋಲುತ್ತಿತ್ತು. ತನಗೆ ಆ ಮಗು ಬೇಕೆಂದು ರಾಣಿ ಕೇಳಿದಳು. ಸಂಜಿಯ ಅಜ್ಜನು ಯಾವ ಮಾತನ್ನೂ ಆಡದೇ ಕೊಟ್ಟನು. ಅದರ ಪಾಲನ ಪೋಷಣೆಗೆ ದಾಸಿಯೊಬ್ಬಳನ್ನು ನಿಯಮಿಸಿದಳು. ಏರಿ ಬಂದ ನದಿಯು ಇಳಿಯಲೆಂದು ರಾಣಿಯು ಪಾರ್ವತಿಯನ್ನು ಪ್ರಾರ್ಥಿಸಿದಳು. ಅಂದು ರಾತ್ರಿ ಅವಳಿಗೊಂದು ಕನಸು ಬಿತ್ತು.

" ದೊರೆಯ ಅನ್ಯಾಯದಿಂದ ಸಂಜಿ ಹಡೆದು ತೀರಿದಳು. ಸಂಜಿಯ ಸಮಾಗಮವನ್ನು ಅನುಭೋಗಿಸಿ ಹೋದ ದೊರೆಗಳಿಗೆ ಪುನಃ ಅವಳ ನೆನಪೇ ಬಾರದ್ದು ಅತಿ ವಿಷಾದ. ಅವಳ ಕೂಗು ಅವನಿಗೆ ಕೇಳದಾಯಿತು. ಒಂದು ಬಲಿಯನ್ನು ಕೊಡಲು ಕಾರಣನಾದ ದೊರೆಯು ಬೇರೊಂದು ಬಲಿಯನ್ನು ಕೊಟ್ಟರೆ ತಾನು ಶಾಂತಳಾಗುವೆನು." ಎಂದು ನದಿಯು ಕನಸಿನಲ್ಲಿ ಬಂದು ತಿಳಿಸಿದಳಂತೆ.

ಮರುದಿವಸ ನದಿಯು ಹೆಚ್ಚು ಏರಹತ್ತಿತು. ಅಂದು ರಾತ್ರಿಯೇ ತಾವು ನದಿಗೆ ತಮ್ಮ ದೇಹವನ್ನು ಅರ್ಪಿಸುವುದಾಗಿ ರಾಣಿಯವರು ಮನದಲ್ಲಿ ಸಂಕಲ್ಪಿಸಿದರು. ಅಂದು ಬೆಳಗಿನಲ್ಲಿ ನೇತ್ರಾವತಿ ರಾಣಿಯವರು ಪಾರ್ವತಿಯ ಎದುರಿನಲ್ಲಿ ಕುಳಿತು ತಮ್ಮ ವಂಶದ ಅಭಿವೃದ್ಧಿಗಾಗಿ ಪಾರ್ವತಿಯು ಕರುಣೆ ಮಾಡಲೆಂದು ಬೇಡಿಕೊಂಡರು. ರಾತ್ರಿಯಲ್ಲಿ ತಮ್ಮ ಪರಿವಾರವು ನಿದ್ರಿಸುತ್ತಿ

ದ್ದಾಗ ಅವರು ಎದ್ದು ಹೋಗಿ ಬೆಟ್ಟವನ್ನೇರಿ ನದಿಯಲ್ಲಿ ಹಾರಿ ತಮ್ಮ ಪ್ರಾಣ ವನ್ನು ಬಿಟ್ಟರು.

ಮುಂಜಾನೆ ರಾಜ್ಞಿಯ ಬೀಡಾರದ ತುಂಬಾ ಕೋಲಾಹಲ. ರಾಣಿಯು ನದಿಯಲ್ಲಿ ಹಾರಿಯೇ ಪ್ರಾಣ ಬಿಟ್ಟಿರುವಳೆಂದು ತರ್ಕಿಸಿದರು. ಏಕೆಂದರೆ ನದಿಯು ಆಗಲೇ ಇಳಿಯಹತ್ತಿತ್ತು. ಬೆಟ್ಟವನ್ನೇರಿದ್ದ ನದಿಯು ಸಾವಕಾಶ ವಾಗಿ ಇಳಿದು ಶಿವಪಾರ್ವತೀ ಗ್ರಾಮಕ್ಕೆ ಬಾರದೆ ಬೇರೊಂದು ಹಾದಿಯನ್ನು ಹಿಡಿದು ಸರಿಯಿತು. ಈ ದುರಂತದ ವಾರ್ತೆ ಕೇಳಿ ದೊರೆಗಳು ಅಲ್ಲಿಗೆ ಬಂದರು. ಆದರೆ ಅಲ್ಲೇನಿದೆ? ರಾಣಿಯ ದೇಹವನ್ನು ಹೊತ್ತುಕೊಂಡು ನದಿಯು ಸಾಗುತ್ತಿತ್ತು.

ದೊರೆಗಳಿಗೆ ಅತಿ ದುಃಖವೆನಿಸಿತು. ತಮ್ಮ ಅನ್ಯಾಯವೇ ಅದಕ್ಕೆ ಹೊಣೆಯೆಂದು ಭಾವಿಸಿದರು. ಅಂದು ರಾಣಿ ದೊರೆಗಳ ಕನಸಿನಲ್ಲಿ ಬಂದು "ಸಂಜೆಯನ್ನು ಅನ್ಯಾಯದಿಂದ ನೀವು ಕೆಡಿಸಿದಿರಿ. ಆ ಹೆಣ್ಣುಗರುಳಿನ ಕೂಗು ನಿಮಗೆ ಹಿಂದುಗಡೆ ಕೇಳಿಬರಲಿಲ್ಲ. ಅದಕ್ಕೇ ನನ್ನ ಮೆಚ್ಚಿನ ಪಾರ್ವತಿಯ ಕೂಗು, ನಿಮ್ಮ ಕುಲದೇವರಾದ ಶಿವನಿಗೆ ಕೇಳುವುದೇ ಬೇಡ! ಸಂಜೆಗೆ ಮಾಡಿದ ಅನ್ಯಾಯಕ್ಕೆ ಅವಳ ಮಗುವನ್ನು ಬೆಳೆಯಿಸಿ ಅವನಿಗೆ ನಿಮ್ಮ ಸಿಂಹಾ ಸನವು ದೊರೆಯುವಂತೆ ಮಾಡಿರಿ" ಎಂದು ಹೇಳಿದಳಂತೆ. ದೊರೆಗಳಿಗೆ ತಮ್ಮ ತಪ್ಪಿಗಾಗಿ ಆದಾಗಲೇ ಪೂರ್ಣ ಪಶ್ಚಾತ್ತಾಪವೆನಿಸಿತ್ತು. ಆ ಸಂಜೆಯ ಮಗು ವನ್ನು ತಂದು ತಮ್ಮಲ್ಲಿ ಇಟ್ಟುಕೊಂಡರು.

ನೇತ್ರಾವತಿಯು ಹಾರಿ ಪ್ರಾಣ ಬಿಟ್ಟದ್ದಕ್ಕೆ ಆ ನದಿಗೆ ನೇತ್ರಾವತೀ ನದಿ ಯೆಂದು ಕರೆಯಹತ್ತಿದರು. ಅಂದು ಮಹಾಪೂರ ಬಂದ ಮೇಲೆ, ಅವಳ ಪಾತ್ರವೇ ಬದಲಾಯಿತಂತೆ. ಮುಂದವಾಗಿ ಹರಿಯುತ್ತಿದ್ದ ನೇತ್ರಾವತಿ ಬೆಟ್ಟದ ವರೆಗೂ ಕುಣಿಯುತ್ತ ಬರಹತ್ತಿದಳಂತೆ. ಕುಮಾರರಾಜನ ಅನ್ಯಾಯಕ್ಕೆ ಶಿವನು ದೇವಾಲಯವಿಲ್ಲದೆ ಬಯಲಿನಲ್ಲಿ ನಿಲ್ಲಲು ನಿಶ್ಚಯಿಸಿದನಂತೆ. ಅದಕ್ಕೆ ಆ ಮೂರ್ತಿಗೆ ದೇವಾಲಯವನ್ನು ಕಟ್ಟಿದರೆ, ಅದು ನೇತ್ರಾವತೀ ನದಿಯಿಂದ ನಾಶವಾಗಿ ಹೋಗುತ್ತದೆ. ಅಂದಿನಿಂದ ಪಾರ್ವತಿಯ ದೇವಾಲಯದ ಕೂಗು ಶಿವನಿಗೆ ಕೇಳುವುದಿಲ್ಲ ಕಾರಣ ಸಂಜೆಯ ಮತ್ತು ನೇತ್ರಾವತಿಯ ಮಾತು

ಗಳನ್ನು ಕುಮಾರರಾಜನು ಕೇಳದ್ದು. ಅದಕ್ಕೆ ಶಿವನಿಗೆ ತಾನು ಏನು ಕೇಳುವುದು ಬೇಡವೆನಿಸಿತಂತೆ. ಕುಮಾರರಾಜನು ಸಾಯುವ ತನಕ ದೇವರನ್ನು ಭಜಿಸಿ ತ್ರಿಕಾಲದಲ್ಲೂ ತನಗೆ ನೇತ್ರಾವತಿ ಹಾಗು ಸಂಜಿಯರೇ ಹೆಂಡಂದಿರಾಗಿ ಸಿಗ ಲೆಂದು ಬೇಡಿಕೊಂಡನಂತೆ. ಅವರು ಮುಂದಿನ ಜನ್ಮದಲ್ಲಿ ಗಂಡ-ಹೆಂಡಿರಾಗಿ ಹುಟ್ಟಿರಬೇಕು. ಆದಕ್ಕೆ ಆ ಜಾತ್ರೆಯ ಕಾಲದಲ್ಲಿ ನರ್ತಿಸಿ ಸೇವೆ ಮಾಡಿದಾ ಗಲೇ ಪಾರ್ವತಿಯು, ಬಯಸಿದ ಫಲ ಸಿಗುವಂತೆ ವರವನ್ನಿತ್ತಳಂತೆ. ಅಂದಿನಿಂದ ಪ್ರತಿವರುಷವೂ ನೇತ್ರಾವತಿ ನದಿಯು ಮಹಾಪೂರದಿಂದ ಬೆಟ್ಟದ ಮೇಲೆ ಏರಿಹೋಗಿ, ಶಿವನ ಪಾದಗಳನ್ನು ತೊಳೆದು ಅವನಿಗೆ ತನ್ನ ಭಕ್ತಿಯನ್ನು ಅರ್ಪಿ ಸುತ್ತಾಳೆ. ಸಂಜಿಯು ಬಹು ಭಕ್ತಿಯಿಂದ ತನಗೆ ರಾಜನಿತ್ತ ವಜ್ರದುಂಗುರ ವನ್ನು ಪಾರ್ವತಿಯ ಉಡಿಯಲ್ಲಿ ಹಾಕಿ ಆಹುತಿಯಾದಳು. ಅವಳಿಗೆ ಮುಂದಿನ ಜನ್ಮದಲ್ಲಿ ಕುಮಾರರಾಜರೇ ಪತಿಯಾಗಿ ದೊರೆಯುವರೆಂಬ ವರವನ್ನು ಪಾರ್ವತಿ ಕೊಟ್ಟಳಂತೆ. ಅಂತೇ ಜಾತ್ರೆಯ ಕಾಲದಲ್ಲಿ ಆ ಉಂಗುರವನ್ನು ಪಾರ್ವತಿಗೆ ಇಡುತ್ತಾರೆ. ಅಂದು ಉಂಗುರವನ್ನು ಮುಟ್ಟಿದರೆ, ಸಂಜಿಯ ಬಯಕೆಯ ಪ್ರತೀಕವೆಂದು, ಎಲ್ಲರ ಬಯಕೆಗಳೂ ಈಡೇರುವುವಂತೆ. ಈ ಕತೆಯನ್ನು ಕೇಳಿದಾಗ, ಮೇಲಿನ ಎಲ್ಲ ಸಂಗತಿಗಳು ಅರ್ಥಪೂರ್ಣವಾಗಿವೆಯೆನಿಸುವುದು !



# ಕಲ್ಲುಗೋರಿ

ಕಾಲ ನೆಕ್ಕಿದನೆ ನಿನ್ನ ಬಾಳ
      ಕುಂಕುಮದ ಕೆಂಪನು ?
ಕೀರ್ತಿ ವೈಭವ ಸೌಂದರ್ಯಗಳು
      ತೂರಿದವೆ ಗಾಳಿಯಲಿ ?
ಬಾಳ ನೆಚ್ಚಲು ಬೇಡ. ಬಾಳಿದು
ಗಾಳಿಗೋಪುರದ ಮಳಲಮನೆ.
ಬಾಳ ನೆಚ್ಚಿ ಮರೆವವರಿಗೆ
ನಿನ್ನ ಬಾಳಗೋಳಿದು ಸಾಕ್ಷಿ !!

ಆಂಗ್ಲ ಇತಿಹಾಸಕಾರನೊಬ್ಬನು ಮಾಂಡೂಕೋಟೆಯನ್ನು ಸಂದರ್ಶಿಸಿ ಮೇಲಿನ ಕವನ ಒಂದನ್ನು ಮೊದಲನೇ ಪುಟದಲ್ಲಿ ಬರೆದು ಕೋಟೆಯ ಇತಿಹಾಸವನ್ನು ಬರೆದಿಟ್ಟಿದ್ದಾನೆ. ಬಹುಶಃ ಮಾಂಡೂಕೋಟೆಯ ಕಥೆಯನ್ನು ಹೇಳುವ ಗ್ರಂಥವೆಂದರೆ ಇದೊಂದೆ.

ಮಾಂಡೂಕೋಟೆ ಮಧ್ಯಭಾರತದಲ್ಲಿದೆ. ಮೂವತ್ತೇಳು ಮೈಲು ವಿಸ್ತೀರ್ಣವಾದ ಈ ಕೋಟೆಯನ್ನು ಬಾಜಬಹಾದ್ದೂರನು ಆರು ವರ್ಷಗಳ ವರೆಗೆ ಆಳಿ ಅದರ ಕೀರ್ತಿಯನ್ನು ಬೆಳಗಿಸಿದನು. ೧೫೫೫ರಲ್ಲಿ ಅವನೇ ಕಟ್ಟಿಸಿದ ರೂಪಮತಿ ಮಹಲು ತನ್ನ ಹಿಂದಿನ ಸೌಂದರ್ಯವನ್ನು ಕಾದುಕೊಂಡು ಬಾಜಬಹಾದ್ದೂರನ ಕರುಣಕಥೆಯನ್ನು ಸಾರುತ್ತದೆ. ಭಾರತದ ಹೃದಯದ ಮಧ್ಯೆ ನಿಂತಿರುವ ಈ ರೂಪಮತಿ ಮಹಲು ದೊರೆಯು ತನ್ನ ಪ್ರಿಯಳಾದ ರೂಪಮತಿಯ ವಾಸಕ್ಕೆಂದು ಕಟ್ಟಿಸಿದ ಅರಮನೆ.

ನರ್ಮದೆಯ ದಂಡೆಗೆ ನಿಂತಿರುವ ಈ ಮಹಲಿನ ಮೇಲೆ ಎರಡು ಕಲ್ಲು ಮಂಟಪಗಳಿವೆ. ಅವುಗಳಲ್ಲಿ ಕುಳಿತುಕೊಂಡು ರೂಪಮತಿಯು ತನ್ನ ಪ್ರಿಯತಮನಾದ ಬಾಜಬಹಾದ್ದೂರನ ಮನವನ್ನು ತಣಿಸಲು ಹಾಡುತ್ತಿದ್ದಳಂತೆ. ಉತ್ತರ ಭಾರತದಲ್ಲಿ ಇಂದು ಮನೆಮನೆಗೂ ಹಬ್ಬಿರುವ ಅನೇಕ ಪದ್ಯಗಳನ್ನು ರೂಪಮತಿಯೇ ರಚಿಸಿದಳೆಂದು ಹೇಳುತ್ತಾರೆ. ಅಂದಿನ ಸಂಗೀತಗಾರರ ಮಾಲೆಯಲ್ಲಿ ಅವಳಿಗೆ ಒಂದು ಶ್ರೇಷ್ಠ ಸ್ಥಾನವಿತ್ತು. ಈ ಸಂಗೀತ ವಿದುಷಿಯನ್ನು ಇಂದಿಗೂ ಉತ್ತರ ಭಾರತದಲ್ಲಿ ಭಾರತೀಯ ಔತ್ತರೇಯ ಸಂಗೀತವನ್ನು ಪ್ರಾರಂಭಿಸುವಾಗ ನೆನೆಯುತ್ತಾರೆ. ಅವಳ ಸ್ಮೃತಿಗಾಗಿ ಅನೇಕ ಸಮಾರಂಭಗಳನ್ನು ಏರ್ಪಡಿಸುತ್ತಾರೆ. ಅವಳಿಗಿದ್ದ ಕಂಠವದು ಕೋಗಿಲೆಯ ಕಂಠ ! ಅವಳಿಗಿದ್ದ ಸೌಂದರ್ಯವದು ಬ್ರಹ್ಮನಿತ್ತ ಕಾಣಿಕೆ ! ಹಿಂದೂ ಹುಡಿಗೆ ರೂಪಮತಿ ಯವನರಾಳಿಕೆಯಲ್ಲಿ ಮುಸಲ್ಮಾನ ಬಾದಶಹ ಬಾಜಬಹಾದ್ದೂರನ ಪಟ್ಟದ ರಾಣಿಯಾಗುವದೆಂದರೆ ಸಾಮಾನ್ಯವಾದ ಮಾತಲ್ಲ !

ಬಾಜಬಹಾದ್ದೂರನು ೧೫೫೫ ರಿಂದ ೧೫೬೧ ವರೆಗೆ ಮಾತ್ರ ಮಾಂಡೂ ಕೋಟೆಯನ್ನು ಆಳಿದರೂ ಅದನ್ನು ಬಹು ವಿಧವಾಗಿ ಸುಧಾರಿಸಿದನಂತೆ. ಇತಿಹಾಸಕಾರರು ಅದನ್ನು ಸಂದರ್ಶಿಸಿದಾಗ ರೂಪಮತಿ ಹಾಗು ಬಾಜಬಹಾದ್ದೂರರ ಕರುಣಕಥೆಯನ್ನು ನೆನೆಯದೆ ಹಿಂತಿರುಗುವಂತಿಲ್ಲ. ಜಾತಿಯ ಭೂತ ಒಂದು ಬೆಳೆದು ನಿಂತಾಗ ಸಾಮಾನ್ಯ ಮನೆತನದ ಹೆಣ್ಣೊಂದು ಆಳರಸನನ್ನು ಮದುವೆಯಾಗುವದೆಂದರೆ ಅಂದಿನ ಕಾಲಕ್ಕೆ ಒಂದು ದೊಡ್ಡ ಸಮಸ್ಯೆ.

ಆ ಸುಂದರವಾದ ರೂಪಮತಿ ಮಹಲಿನ ಮುಂದೆ ಬಾಜಬಹಾದ್ದೂರನ ಗೋರಿಯಿದೆ. ತಾನು ಜೀವಿಸಿರುವಾಗಲೇ ತನ್ನನ್ನು ಅಲ್ಲಿ ಹುಗಿಯಬೇಕೆಂದು ಮೊದಲೇ ಅದನ್ನು ಕಟ್ಟಿಸಿದ್ದನು. ಬಹು ಸುಂದರವಾದ ಕಲ್ಲಿನಿಂದ ಅದನ್ನು ಕಟಿದಿದ್ದಾರೆ. ಆ ಗೋರಿಯ ಮೇಲೆ ಒಂದು ಕಬ್ಬಿಣದ ತೋಫಿದೆ. ಇದೊಂದು ಇಲ್ಲಿಯ ವಿಚಿತ್ರ ದೃಶ್ಯ ! ಆ ತೋಫು ಬಹು ಭಾರವಿದೆ. ಭಾರದ ತಕ್ಕ ಭವ್ಯತೆಯಿದೆ. ಅದನ್ನು ಇಟ್ಟ ತಾಣದಿಂದ ಸರಿಸಲು ನೂರು ಆನೆಗಳಿಗೂ ಸಾಧ್ಯವಿಲ್ಲ. ನಾವು ಹಂಪಿಯಲ್ಲಿದ್ದ ಕಲ್ಲುಕಂಬಗಳನ್ನು ಬಾರಿಸಿದರೆ " ಸರಿಗಮ" ಎಂಬ ಮಂಜುಳ ಧ್ವನಿಯನ್ನು ಕೇಳಬಹುದು. ಆದರೆ ಇಲ್ಲಿ ಆ

ಗೋರಿಯ ಮೇಲಿಟ್ಟಿದ್ದ ತೋಫನ್ನು ಬಾರಿಸಿದರೆ, ಹೆಣ್ಣಿ ಧ್ವನಿಯೊಂದು ಒಂದು ಚಣ ಹಾಡಿದಂತೆ ಕೇಳಿಬರುತ್ತದೆ. ಧ್ವನಿಯು ಅತ್ಯಂತ ಮಧುರವಿದ್ದುದರಿಂದ ಬಂದವರೆಲ್ಲರೂ ಅದನ್ನು ಮನಸ್ಸು ದಣಿಯುವಂತೆ ಬಾರಿಸಿ ಧ್ವನಿಯನ್ನು ಆಲಿಸುತ್ತಾರೆ. ಆದಕ್ಕೆ ರೂಪಮತಿ ತೋಫೆಂದು ಕರೆಯುತ್ತಾರೆ. ಅದರ ಕೆಳಗಿದ್ದ ಆ ಕಲ್ಲುಗೋರಿಯನ್ನು ಬಾರಿಸಿದರೆ 'ವ್ಹಾ ವ್ಹಾ' ಎಂಬ ತೃಪ್ತಿಸೂಚಕ ಧ್ವನಿ ಹೊರಬರುತ್ತದೆ. ಮೇಲೆ ಕುಳಿತವಳು ಸಂಗೀತವನ್ನು ಹಾಡಿದರೆ ಕೆಳಗೆ ಕುಳಿತವನು ಅದನ್ನು ಮೆಚ್ಚಿ ತೃಪ್ತಿಸೂಚಕ ಧ್ವನಿಯಿಂದ ಅವಳನ್ನು ಆದರಿಸುವನಂತೆ. ಆ ಕೋಟೆಯೆಲ್ಲವೂ ಹಾಳುಬಿದ್ದರೂ ಈ ಗೋರಿ ಹಾಗೂ ರೂಪಮತಿ ಮಹಲುಗಳು ಇನ್ನೂ ನಿಂತಿವೆ. ಆ ಗೋರಿಯು ಅಮರ ಹಾಗು ಸತ್ಯಪ್ರೇಮದ ದ್ಯೋತಕವಾಗಿದ್ದರಿಂದ ಅದು ಚಿರಂಜೀವಿಯಂತೆ. ಇಂತಹ ವಿಚಿತ್ರ ಶಿಲಾಗೋರಿಯನ್ನು ನೋಡಲು ಬಹು ಜನರು ಅಲ್ಲಿಗೆ ಬರುತ್ತಾರೆ.

ಇಲ್ಲಿಯ ಈ ಗೋರಿಯ ಸಮಸ್ಯೆ ವಿಜ್ಞಾನಿಗಳ ತರ್ಕಕ್ಕೆ ನಿಲುಕದು ಆದರೆ ಹಳ್ಳಿಗರು ಹೇಳುವ ಕಥೆಯನ್ನು ಕೇಳಿದರೆ ಅದನ್ನು ನಿರಾಕರಿಸಲು ಬರುವಂತಿಲ್ಲ. ವಿಜ್ಞಾನಕ್ಕೆ ಬಗೆಹರಿಯದ ಸಮಸ್ಯೆಯನ್ನು ಗಾವಿಲರು ತಮ್ಮ ಹಿಂದಿನ ಅನುಭವಗಳ ಮೇಲಿಂದ ಹೇಳುತ್ತಾರೆ. ಮೇಲಿನ ತೋಫಿನಲ್ಲಿ ಇಂದಿಗೂ ರೂಪಮತಿಯು ರಾಜ್ಯವಾಳುತ್ತಿದ್ದಾಳಂತೆ ಕೆಳಗಿನ ಗೋರಿಯಲ್ಲಿ ಅವಳ ಪತಿ ಬಾಜಬಹದ್ದೂರನು ಇನ್ನೂ ಅವಳ ಸಂಗೀತವನ್ನು ಕೇಳಿ ತೃಪ್ತಿಬಡಲು ಕುಳಿತಿರುವನಂತೆ. ಇವಳನ್ನು ಯಾರಾದರೂ ಹೊಡೆದು ಎಚ್ಚರಿಸಿದರೆ ಪ್ರಿಯತಮನ ಆನಂದಕ್ಕಾಗಿ ಆಲಾಪವನ್ನು ಎತ್ತುವಳಂತೆ. ಅದನ್ನು ಮೆಚ್ಚಿ ಅವನು 'ವ್ಹಾ' ಎಂಬ ಉದ್ಗಾರವನ್ನು ಹೊರಪಡಿಸುವನಂತೆ. ಆ ಗೋರಿಯ ಹಿಂದೆ ಒಂದು ಪ್ರಣಯದ ಕಥೆ ಅಡಗಿದೆ.

* * * *

ಮಧ್ಯಭಾರತದಲ್ಲಿರುವ ಮಾಂಡೂಕೋಟೆಯ ದೊರೆಗೆ ಯುದ್ಧವೆಂದರೆ ಬೇಸರಿಕೆ. ಸದಾಕಾಲವೂ ವಿಲಾಸದಲ್ಲಿ ಕಾಲ ಕಳೆಯುವದೆಂದರೆ ಉತ್ಸಾಹ.

ರೂಪಮತಿ ಅದೇ ಪ್ರಾಯಕ್ಕೆ ಬಂದ ಹಿಂದೂ ಹುಡಿಗಿ. ಸಾಮಾನ್ಯ ಮನೆತನ ಒಂದರಲ್ಲಿ ಜನ್ಮವೆತ್ತಿದ ಬಾಲಿಕೆ. ನಿತ್ಯವೂ ನರ್ಮದೆಯ ದಡಕ್ಕೆ ಬಂದು ದೇವರ ನಾಮುಗಳನ್ನು ಹಾಡಿ ಅವಳನ್ನು ಪೂಜಿಸಿ ಮನೆಗೆ ತೆರಳುವ ದೆಂದರೆ ಅವಳಿಗೆ ಅತೀವ ಸಂತೋಷ. ಅದರಲ್ಲಿ ತಾನೇ ರಚಿಸಿದ ದೇವರ ನಾಮುಗಳನ್ನು ಹಾಡುವದೆಂದರೆ ಮತ್ತಿಷ್ಟು ಸಂತೋಷ. ಹಾಡಿನಲ್ಲಿ ತಾನು ಎಷ್ಟು ಸಮಯವನ್ನು ನದಿಯಲ್ಲಿ ಕಳೆಯುವೆನೆಂಬುದರ ಅರಿವೇ ಅವಳಿಗೆ ಇರು ತ್ತಿದ್ದಿಲ್ಲ. ತಾಯಿಯಿಲ್ಲದ ಮಗಳೆಂದು ತಂದೆಯೇ ಅವಳನ್ನು ಜೋಪಾನ ಮಾಡುತ್ತಿದ್ದನು. ಒಂದೊಂದು ಸಲ 'ಮಗೂ ರೂಪಮತಿ, ಇಷ್ಟೇಕೆ ತಡ ಮಾಡಿ ಬಂದಿ' ಎಂದು ತಂದೆ ಕೇಳಿದರೆ, 'ಏನಿಲ್ಲ ಬಾಬಾ, ಹಾಡುತ್ತ ನಿಂತೆ, ದಿನಮಣಿಯು ಸರಿದದ್ದೆ ತಿಳಿಯಲಿಲ್ಲ' ಎಂದು ಹೇಳುತ್ತಿದ್ದಳು. ಮುಗ್ಧ ಹುಡಿ ಗಿಗೆ ಹಾಡಿನ ಹುಚ್ಚು ಎಂದು ತಿಳಿದು ಮುದುಕ ತಂದೆ ಸುಮ್ಮನಾಗಿಬಿಡು ತ್ತಿದ್ದನು.

ಮಗಳು ಕಾವ್ಯವನ್ನು ರಚಿಸುವಲ್ಲಿ, ಹಾಡುವಲ್ಲಿ, ಅತ್ಯಂತ ಪರಿಣಿತ ಳೆಂದು ಜನರಾಡುವ ಮಾತನ್ನು ಕೇಳಿ ಮುದುಕ ತಂದೆ ಸಂತೋಷಪಡುತ್ತಿ ದ್ದನು. ನೋಡಲು ತಾಯಿಯಿಲ್ಲವಲ್ಲ ಎಂದು ದುಃಖಿಸುತ್ತಿದ್ದನು. ತಾಯಿ ಹೇಳುತ್ತಿದ್ದ 'ನನ್ನ ಮಗು ರೂಪಮತಿ ಎಂದರೆ ನಾಡಿಗೇನೇ ಸುಂದರಳಾದ ಹುಡಿಗೆ. ರಾಜರನ್ನು ಬಿಟ್ಟು ಬೇರೆಯವರು ಇವಳನ್ನು ಮದುವೆ ಮಾಡಿ ಕೊಳ್ಳಲಿಕ್ಕೆ ಅಯೋಗ್ಯರು. ಇವಳಿಗಿದ್ದ ಕಂಠ ಹಾಗು ವಿದ್ಯೆಯನ್ನು ನೋಡಿ ದರೆ ಇವಳು ಸಾಕ್ಷಾತ್ ಸರಸ್ವತಿಯಂತೆ ಕಾಣುತ್ತಾಳೆ' ಎಂಬ ಮಾತು ಒಮ್ಮೊಮ್ಮೆ ನೆನಪಾಗಿ ಮಗಳ ಮುಖವನ್ನು ತದೇಕ ದೃಷ್ಟಿಯಿಂದ ನೋಡು ತ್ತಿದ್ದನು. ನಿಜಕ್ಕೂ ಅವಳ ಮುಖದಲ್ಲಿ ಕಣ್ಣು ಕುಕ್ಕಿಸುವಂತಹ ಸೌಂದರ್ಯ ನೃತ್ಯ ಮಾಡುತ್ತಿದೆ ಎಂದು ಅನಿಸಿದ ಮೇಲೆ ದೃಷ್ಟಿಯನ್ನು ಬದಲಿಸುತ್ತಿದ್ದನು. ತಂದೆಯ ಅರ್ಥಪೂರ್ಣ ದೃಷ್ಟಿಯನ್ನು ನೋಡಿ ರೂಪಮತಿ ತುಸು ನಾಚುತ್ತಿ ದ್ದಳು. ಅವಳು ಲಜ್ಜೆಯನ್ನು ತಾಳಿದಾಗ ಅವಳ ಮುಖವು ಮತ್ತಿಷ್ಟು ಕೆಂಪಾಗಿ ಕಂಗೊಳಿಸುತ್ತಿತ್ತು ಅವಳ ಸಂಗೀತವು ನಡೆದಾಗ ನದಿಯ ದಂಡೆಯ ಮೇಲಿದ್ದ ಜನರೆಲ್ಲರಿಗೂ ಆನಂದವೇ ಆನಂದ. ತಮ್ಮ ಕೈಯ

ಲ್ಲಿಯ ಕಾರ್ಯಗಳನ್ನು ಬಿಟ್ಟು ದೇವರ ನಾಮವನ್ನು ಕೇಳುವಲ್ಲಿ ಮಗ್ನರಾಗುತ್ತಿದ್ದರು. ಅನೇಕರು ಇವಳ ಬರುವನ್ನೇ ಕಾಯುತ್ತ ದಡದಲ್ಲಿ ನಿಲ್ಲುತ್ತಿದ್ದರು. ಇವಳ ಪ್ರಾರ್ಥನೆಯು ಪ್ರಾರಂಭವಾದ ಕೂಡಲೆ ಅದೇ ದಡದಲ್ಲಿದ್ದ ಅರಮನೆಯ ಸ್ತ್ರೀಯರು ಕಿಡಕಿಗೆ ಬಂದು ನಿಲ್ಲುತ್ತಿದ್ದರು. ಶಾರೀರಕ್ಕೆ ತಕ್ಕ ಸೌಂದರ್ಯವನ್ನು ಕೊಟ್ಟಿರುವನೆಂದು ದೇವರನ್ನು ಬಂದವರೆಲ್ಲರೂ ಹೊಗಳುತ್ತಿದ್ದರು.

ಇಂತಹ ಸಂಗೀತಶ್ರಾವಕರಲ್ಲಿ ಬಾಜಬಹಾದ್ದೂರನೂ ಒಬ್ಬನು. ಅವಳು ಎಷ್ಟು ಸಮಯದವರೆಗೆ ಹಾಡುವಳೋ ಅಷ್ಟು ಕಾಲವೂ ಬಾಜಬಹಾದ್ದೂರನಿಗೆ ಕೇಳಬೇಕೆಂಬ ಕುತೂಹಲ. ಅನೇಕ ಸಲ ಯಾರು ಹಾಡುವರೆಂಬುದನ್ನು ನೋಡಲಿಕ್ಕೆ ಹೋಗಬೇಕೆಂಬ ಇಚ್ಛೆಯಾಗುತ್ತಿತ್ತು. ತಾನೂ ಸ್ವತಃ ಹಾಡುತ್ತಿದ್ದುದರಿಂದ ಸಂಗೀತವೆಂದರೆ ಅವನಿಗೆ ಪ್ರೀತಿ. ಆದರಲ್ಲಿಯೂ ರೂಪಮತಿಯ ಧ್ವನಿಯು ಹೊರಹೊರಟ ಕೂಡಲೇ ಗೋವುಗಳು ಕೃಷ್ಣನ ವೇಣುನಾದಕ್ಕೆ ಹೋಗುತ್ತಿದ್ದಂತೆ ಹೋಗುತ್ತಿದ್ದನು. ಹಾಡಿನ ಧ್ವನಿಯು ಹೆಣ್ಣಿನದಾಗಿದ್ದರಿಂದ ಅವಳನ್ನು ಅರಮನೆಗೆ ಆಹ್ವಾನಿಸಲು ಅಂಜಿದ್ದನು.

ಒಂದು ಸಲ ಅವಳು ಹಾಡುವ ಸಮಯದಲ್ಲಿ ಬಾಜಬಹಾದ್ದೂರನು ಮನಸ್ಸು ನಿಲ್ಲದೆ ನದೀ ದಡಕ್ಕೆ ಹೋದನು. ಅವಳು ನರ್ಮದೆಯಕಡೆ ಮುಖ ಮಾಡಿ ಆಲಾಪವನ್ನು ಎತ್ತಿದಳು. ಹಾಡಿನ ಮೇಲೆ ಹಾಡಾದವು. ರಾಜನು ಮೂಕ ಗೊಂಬೆಯಂತೆ ಮಳಲಿನಲ್ಲಿ ನಿಂತಿದ್ದನು. ಅವಳು ಹಾಡನ್ನು ನಿಲ್ಲಿಸಿ ತಿರುಗಿದರೂ ಇವನ ದೇಹದ ಮೇಲೆ ಪ್ರಜ್ಞೆಯೇ ಇದ್ದಿರಲಿಲ್ಲ. ಎದುರಿಗೆ ರಾಜ ನಿಂತುದನ್ನು ನೋಡಿ ಬೆಚ್ಚಿದಳು. ಜನರ ವಿಶೇಷ ಪರಿಚಯವು ರಾಜನಿಗಿರದೆ ಹೋದರೂ ಜನರು ಮಾತ್ರ ರಾಜನನ್ನು ಗುರುತಿಸಬಲ್ಲರು. 'ದೇವರು ನಿನಗೆ ತುಂಬಾ ಉತ್ತಮ ಕಂಠವನ್ನು ಕೊಟ್ಟಿದ್ದಾನೆ' ಎಂದು ರಾಜನು ರೂಪಮತಿಯನ್ನು ಅಭಿನಂದಿಸಿದನು. ಅವಳ ಸುಂದರ ಮುಖವನ್ನು ಕಂಡು ರಾಜನಿಗೆ ಹುಚ್ಚೇ ಹಿಡಿದಂತಾಯಿತು. ರಾಜಕುಲವನ್ನು ಬಿಟ್ಟು ಸಾಮಾನ್ಯರಲ್ಲಿ ಇಂತಹ ರೂಪರಾಶಿಯು ಜನ್ಮವೆತ್ತುವದೆಂಬುದರ ಕಲ್ಪನೆಯೇ ಅವನಿಗೆ ಇದುವರೆಗೆ ಇದ್ದಿರಲಿಲ್ಲ. ಇವಳನ್ನು ನೋಡಿ ಅಲ್ಲಿಂದ ಸರಿಯಬೇಕೆಂದರೆ ಮನಸ್ಸೇ ಆಗಲಿಲ್ಲ. ಆದರೆ ರಾಜನ ವರ್ತನೆ ಅನುಚಿತವೆನಿಸಬಾರದೆಂದು

ಸರಿದು ನಿಂತಸು. ರೂಪಮತಿ ಏನನ್ನೂ ಮಾತನಾಡದೆ ರಾಜನ ಕಡೆ ಒಂದು ದೃಷ್ಟಿಯನ್ನು ಬೀರಿ ನಸುನಗುತ್ತ ಮನೆಯ ಕಡೆ ಧಾವಿಸಿದಳು. ಅಂದು ಅವಳಿಗೆ ವಿಜಯೋನ್ಮಾದವಾಗಿತ್ತು. ಅದುವರೆಗೂ ತಾನೊಬ್ಬ ಸಾಮಾನ್ಯ ಸಂಗೀತಗಾರಳೆಂದು ತಿಳಿದುಕೊಂಡಿದ್ದಳು. ರಾಜನ ದೃಷ್ಟಿ ಅವಳ ಮೇಲೆ ಬೀಳಲು ಅವಳಿಗೂ ತಾನೊಬ್ಬ ಕಲಾವಿದೆಯೆಂಬ ಕಲ್ಪನೆ ಮೂಡಿತು.

ಮರುದಿವಸ ಮಾಂಡೂಕೋಟೆಯಲ್ಲಿ ಬಾಜಬಹದ್ದೂರ ದೊರೆಗೆ ಹಿಂದೂ ಹುಡಿಗೆಯೊಬ್ಬಳ ಬಗ್ಗೆ ಜ್ವರ ಹಿಡಿದಿದೆ ಎಂದು ಗುಲ್ಲೆದ್ದಿತು. ದೊರೆಯು ಇಚ್ಛಿಸಿದ ಮೇಲೆ ದೊರೆಯದಿರುವದು ಎಷ್ಟರ ಮಾತು! ಸರಿ. ಮುಂದೆರಡು ದಿನಗಳಲ್ಲಿಯೇ ಅರಮನೆಯ ಆಮಂತ್ರಣವು ರೂಪಮತಿಯ ಮನೆಗೆ ಬಂದಿತು. ಒಂದು ಸಂಗೀತ ಕಚೇರಿ ನಡೆಯಿತು. ಮುತ್ತಿನ ಕಂಠಹಾರ ಒಂದನ್ನು ಮೆಚ್ಚುಗೆಯೆಂದು ರಾಜನು ಅವಳಿಗೆ ತನ್ನ ಹಸ್ತದಿಂದಲೇ ಕೊಟ್ಟನು. ಅಂದು ಸಂಗೀತದ ಮೇಲೆ ತನಗಿದ್ದ ಪ್ರೀತಿಯನ್ನು ವ್ಯಕ್ತಪಡಿಸಿದನು.

ದಿನದಿನಕ್ಕೂ ಅವಳ ಸಲುಗೆ ಬೆಳೆಯಿತು. ಸ್ನೇಹವು ಚಿಗುರಿತು. ಸ್ನೇಹವು ಹೆಮ್ಮರವಾಗಿ ಪ್ರಣಯಕ್ಕಿಳಿಯಿತು. ರೂಪಮತಿಯನ್ನು ಅಗಲಿ ಒಂದು ಕ್ಷಣದವರೆಗೂ ಉಳಿಯುತ್ತಿದ್ದಿಲ್ಲ ರಾಜ. ಇವಳ ವಾಸಕ್ಕೆಂದೇ ತಾನೇ ಆಸ್ಥೆ ವಹಿಸಿ ಒಂದು ಮಹಲನ್ನು ನಿರ್ಮಿಸಿ ಅದಕ್ಕೆ ರೂಪಮತಿ ಮಹಲೆಂದು ಹೆಸರನ್ನಿಟ್ಟನು. ಅದರ ಮೇಲೆ ಎರಡು ಕಲ್ಲುಮಂಟಪಗಳನ್ನು ಕಟ್ಟಿಸಿದನು. ಅದರಲ್ಲಿ ಕುಳಿತು ನಿತ್ಯವೂ ನರ್ಮದೆಯ ಸೌಂದರ್ಯವನ್ನು ಸವಿಯುವಲ್ಲಿಯೋ ಸಂಗೀತವನ್ನು ಹಾಡಿ ಮನಸ್ಸಿಗೆ ಆನಂದವನ್ನು ಪಡೆಯುತ್ತಲೋ ಪ್ರಣಯಚೇಷ್ಟೆಯಲ್ಲಿ ಕಾಲಹರಣ ಮಾಡುತ್ತಲೋ ಸಮಯವನ್ನು ವ್ಯಯಿಸಹತ್ತಿದನು. ರಾಜಕಾರಣವು ಬೇಸರಿಕೆಯಾಯಿತು. ಎಲ್ಲ ಹೊಣೆಯನ್ನು ಮಂತ್ರಿಗಳ ಮೇಲೆ ಹೊರಿಸಿ ತಾನು ಹಾಯಾಗಿ ರೂಪಮತಿ ಸಾನ್ನಿಧ್ಯದಲ್ಲಿ ಸಮಯವನ್ನು ಕಳೆಯಹತ್ತಿದನು.

ರಾಜ ರೂಪಮತಿಯರ ಬೆಳೆದು ನಿಂತ ಸಂಬಂಧದ ವಾರ್ತೆ ಎಲ್ಲೆಡೆಯಲ್ಲಿಯೂ ಹಬ್ಬಿತು. ರೂಪಮತಿಯ ಸೌಂದರ್ಯದ ಸೌರಭವು ದಿಲ್ಲೀ ಸಿಂಹಾ

ಸನಕ್ಕೂ ಒಡೆಯಿತು. ಅಕಬರನು ತನ್ನ ಸೇನಾಪತಿ ಅವಮುಖಾನನನ್ನು ಮಾಂಡೂಕೋಟೆಯನ್ನು ಮುತ್ತಲಿಕ್ಕೆ ಕಳಿಸಿದನು. ದಿಲ್ಲೀ ಚಕ್ರವರ್ತಿಯ ಸೈನ್ಯವು ಕೋಟೆಯ ಸುತ್ತಲೂ ಬೀಡುಬಿಟ್ಟದ್ದನ್ನು ಕೇಳಿ ಬಾಜಬಹದ್ದೂರನಿಗೆ ಜೀವವೇ ಹಾರಿಹೋದಂತಾಯಿತು. ಮುಂದಿನ ವಿಚಾರ ವಿನಿಮಯಕ್ಕಾಗಿ ಮಂತ್ರಿಗಳನ್ನೂ ಸೇನಾಪತಿಗಳನ್ನೂ ಕೋಟೆಯ ಪ್ರಮುಖರನ್ನೂ ಕರೆಯಿಸಿ ದನು. ಎಲ್ಲರೂ ಏಕಕಂಠದಿಂದ ಯುದ್ಧವನ್ನೇ ಕೈಕೊಳ್ಳಲು ಸೂಚಿಸಿದರು. ಇಲ್ಲದೆ ಹೋದರೆ ಅಕಬರನೊಡನೆ ಒಪ್ಪಂದವನ್ನು ಮಾಡಿಕೊಂಡು ತನ್ನ ಕೋಟೆಯಲ್ಲಿ ತಾನಿದ್ದರಾಯಿತೆಂದು ದೊರೆಯು ವಿಚಾರ ಮಾಡಿದ್ದನು. ಅಂದು ಅವನಿಗೆ ನಿದ್ರೆಯೇ ಬರಲಿಲ್ಲ; ರೂಪಮತಿಯನ್ನು ಕೇಳಿದನು: "ನಾಳೆ ಯುದ್ಧ ಪ್ರಾರಂಭವಾಗಲಿರುವದೆಂದು ಕೇಳಿದ್ದೀಯಾ ?"

"ಕೇಳಿದ್ದೇನೆ. ಅದಕ್ಕೇತಕ್ಕೆ ಇಷ್ಟೊಂದು ಅಂಜಿಕೆ ನಿಮಗೆ ?"

"ಪ್ರಾರಂಭವಾದರೆ ನನ್ನ ಸೋಲು ಖಂಡಿತ. ನೀನು ಅಕಬರನ ಅರ ಮನೆಯನ್ನು ಸೇರುವದು ಅಷ್ಟೇ ಖಂಡಿತ !"

"ನಿಮಗಾರು ಈ ಹುಚ್ಚನ್ನು ತಲೆಯಲ್ಲಿ ಹಾಕಿದರು ? ನಿಮ್ಮ ಸೋಲಿ ನೊಡನೆ ನನ್ನ ಸಾವು ಕಟ್ಟಿಟ್ಟದ್ದೆ."

"ಇದು ನನ್ನ ಕೋಟೆಗಾಗಿ ಯುದ್ಧವಲ್ಲ. ನಿನ್ನ ಸುಂದರ ಮುಖದ ದರ್ಶನವನ್ನು ಪಡೆಯುವದಕ್ಕೆ ಯುದ್ಧ "

"ಇದೇನು ನಿಮ್ಮ ಮಾತು ? ನೀವೇ ನನಗೆ ಸ್ವಾಮಿ ! ಸ್ವರ್ಗ !!"

ದೊರೆಯು ಸಂತೋಷಭರಿತನಾಗಿ ಅವಳನ್ನು ಅಪ್ಪಿಕೊಂಡು ಅವಳಿಗೆ ನೂರಾರು ಸಲ ಮುತ್ತಿಟ್ಟನು. ಅವನಿಗೆ ತೃಪ್ತಿಯೇ ಇಲ್ಲ ಭೃಂಗವು ಪುಷ್ಪದ ಮೇಲೆ ಕುಳಿತು ಮಧುವನ್ನು ಹೀರುವಂತೆ ರಾಜನು ಅವಳ ಮುಖದ ಸೌಂದರ್ಯವನ್ನು ಹೀರಲು ಪ್ರಯತ್ನಿಸಿದನು. ತನ್ನ ಬಲಗೈಯಲ್ಲಿದ್ದ ವಜ್ರ ದುಂಗುರವನ್ನು ತೆಗೆದು ಅವಳ ಕೈಯಲ್ಲಿಟ್ಟು "ಇದು ನಿನ್ನ ಪ್ರಾಣರಕ್ಷಣೆಯ ದಂಡ !" ಎಂದು ಹೇಳಿದನು. ಅಂದು ಅವನು ಅವಳೊಡನೆ ಮಾತನಾಡಿದ್ದೇ ಆಡಿದ್ದು ನಕ್ಕಿದ್ದೇ

ಮರುದಿವಸ ಯುದ್ಧಸೂಚಕ ನಗಾರಿ ಬಾರಿಸತೊಡಗಿತು; ಕಹಳೆ ಕೂಗ ಹತ್ತಿತು. ಕೋಟೆಯ ಮೇಲೆ ಧ್ವಜ ಏರಿತು. ಆದಮಖಾನನ ಸೈನ್ಯವು ಪತಾಕೆಯನ್ನು ಕಂಡು ಯುದ್ಧಕ್ಕೆ ಸನ್ನದ್ಧವಾಗತೊಡಗಿತು. ಅಕಬರನ ಕುದುರೆಯ ಸವಾರರು ಸಿದ್ಧರಾದರು. ಕೋಟೆಯ ಬಾಗಿಲು ತೆರೆಯಿತು. ಸಂಜೆಯೆನ್ನುವದರೊಳಗೆ ಅಕಬರನ ಸೈನ್ಯವು ಕೋಟೆಯನ್ನು ವಶಪಡಿಸಿ ಕೊಂಡು ಬಾಜಬಹಾದ್ದೂರ, ರೂಪಮತಿಯರನ್ನು ಸೆರೆಹಿಡಿಯಿತು. ಆದು ವರೆಗೂ ರೂಪಮತಿಯ ಸೌಂದರ್ಯವನ್ನು ಬಾಯಿಂದ ಕೇಳಿದ ಆದಮಖಾನ ನಿಗೆ ಅಂದು ಪ್ರತ್ಯಕ್ಷ ನೋಡಲಿಕ್ಕೆ ದೊರೆತುದರಿಂದ ತನ್ನನ್ನು ತಾನೇ ಅಭಿ ನಂದಿಸಿಕೊಂಡನು. ಅವಳನ್ನು ನೋಡಿ ಮುಗ್ಧನಾದನು. ಅಂದು ಅವನು ಏನನ್ನೂ ಮಾಡಲು ಬರುವಂತಿಲ್ಲ. ಅಕಬರನು ರಾಜಪರಿವಾರಕ್ಕೆಲ್ಲ ರಾಜೋ ಚಿತ ಮರ್ಯಾದೆಯನ್ನೇ ಕೊಡಲು ಆಜ್ಞಾಪಿಸಿದನು. ಬಲೆಯಲ್ಲಿ ಬಿದ್ದ ಇಲಿ ಯನ್ನು ಕಂಡು ಹಾರಾಡುವ ಬೆಕ್ಕಿನಂತೆ ಹಾರಾಡಿದನು. ದೊರೆಯು ತನ ಗಾಗಿ ಮೀಸಲಿರಿಸೆಂದ ರೂಪಮತಿಯನ್ನು ತಾನೆ ಸೆಳೆಯಬೇಕೆಂಬ ಆಶೆ ಆದಮ ಖಾನನಿಗೆ ಹೆಚ್ಚಾಯಿತು. ಆದರೆ ರಾಜಾಜ್ಞೆಯೊಂದು ಇದೆಯಲ್ಲ! ಎಲ್ಲ ರನ್ನೂ ದಿಲ್ಲಿಗೆ ಸಾಗಿಸಲಾಯಿತು.

ದಿಲ್ಲಿಯಲ್ಲಿ ಎಲ್ಲ ರಾಜಕೈದಿಗಳಿಗೂ ಬೇರೆ ಬೇರೆ ಸೌಧಗಳು ಕೊಡಲ್ಪ ಟ್ಟವು. ಅಲ್ಲಿ ರೂಪಮತಿ, ಬಾಜಬಹಾದ್ದೂರರನ್ನು ಬೇರೆಯಾಗಿಟ್ಟರು. ಉಪಾಯದಿಂದ ಅವಳನ್ನು ತನ್ನ ಜನಾನಾಕ್ಕೆ ಸೇರಿಸಬೇಕೆಂದು ಅಕಬರನು ಪ್ರಯತ್ನಿಸಹತ್ತಿದನು; ಇತ್ತ ಕಾವಲಗಾರರ ಮುಖಾಂತರ ಸೇನಾಪತಿ ಆದಮ ಖಾನನು ಪ್ರಯತ್ನಿಸತೊಡಗಿದನು. ಆದಮಖಾನನು ಇಂತಹ ಕುಹಕ ಕೃತ್ಯಕ್ಕೆ ಇಳಿದದ್ದನ್ನು ಕಂಡು ಅಕಬರನು ಅವನನ್ನು ಆನೆಯ ಕಾಲಿನ ಕೆಳಗೆ ಹಾಕಿ ಕೊಲ್ಲಿಸಲು ಆಜ್ಞೆ ಹೊರಡಿಸಿದನು.

ಇನ್ನು ತನ್ನ ಮಾನ ಉಳಿಯದೆಂದು ರೂಪಮತಿ ಬಾಜಬಹಾದ್ದೂರ ನನ್ನು ನೆನೆಸಿ ಆ ಉಂಗುರವನ್ನು ಅರೆದು ತನ್ನ ಜೀವನವನ್ನು ಕೊನೆಗೊಳಿಸಿ ದಳು. ಮರುದಿವಸ ಅರಮನೆಯ ತುಂಬೆಲ್ಲ ಈ ವಾರ್ತೆಯೇ ವಾರ್ತೆ. ಅಕ ಬರನಿಗೆ ನಿಜವಾಗಿಯೂ ಕೆಡಕೆನಿಸಿತು. ಸೌಂದರ್ಯದ ಖಣಿಯೊಂದನ್ನು

ಕಳೆದುಕೊಂಡುದಕ್ಕೆ ಹಳಹಳಿಯೆನಿಸಿತು. "ಅವಳು ತಾನು ಬಾಜಬಹಾದ್ದೂರ ನೊಡನೆ ಇರಲು ಇಚ್ಛಿಸುತ್ತೇನೆ ಎಂದು ಹೇಳಿದ್ದರೆ ಅವಳನ್ನು ಬಿಟ್ಟು ಬಿಡು ತ್ತಿದ್ದೆ" ಎಂದು ನುಡಿದು ಖಿನ್ನಮನಸ್ಕನಾದನು. ಬಾಜಬಹಾದ್ದೂರನನ್ನು ಸೆರೆಮನೆಯಿಂದ ಮುಕ್ತನನ್ನಾಗಿ ಮಾಡಿ ಅವನ ರಾಜ್ಯವನ್ನು ತಿರುಗಿಕೊಟ್ಟನು. ಅವನು ರೂಪಮತಿಯ ಶವವನ್ನು ನೋಡಿ ಅತ್ಯಂತ ದುಃಖಿತನಾದನು. ಅವಳ ದೇಹದ ಮೇಲೆ ಬಿದ್ದು ಅತ್ತನು. ಎಂತಹ ಕಠಿಣ ಹೃದಯವವೂ ಕರಗುವಂ ತಹ ವಾತಾವರಣವು ಉದ್ಭವಿಸಿತು.

ಅವಳ ಮೃತದೇಹವನ್ನು ತೆಗೆದುಕೊಂಡು ಮಾಂಡೂ ಕೋಟೆಗೆ ಬಾಜ ಬಹಾದ್ದೂರನು ಬಂದು ಕೋಟೆಯ ಜನರೆಲ್ಲರಿಗೂ ಶವವನ್ನು ದರ್ಶನಕ್ಕಾಗಿ ಇಟ್ಟನು. ಅವಳು ಅಗಲಿ ಹೋದಮೇಲೆ ತಾನೂ ಸಾಯಲು ಸಿದ್ಧನಾದನು. ಒಂದು ಹಳೆಯ ದೊಡ್ಡ ತೋಫನ್ನು ಸಿದ್ಧಪಡಿಸಿದನು. ಮೃತದೇಹವು ತಾಕಿ ದರೆ ತೋಫು ಹಾರುವಂತೆ ವ್ಯವಸ್ಥೆಗೊಳಿಸಿದನು. ತನ್ನ ಮೇಲೆ ತನ್ನ ರಾಜ್ಯ ವನ್ನು ಯಾರು ಆಳಿದರೂ ಅಷ್ಟೇ ಎಂದು ನಾರಿದನು. ತನ್ನ ಶವವನ್ನು ಮಾತ್ರ ಆ ಗೋರಿಯಲ್ಲಿ ಇರಿಸಿ ಅದರ ಮೇಲೆ ರೂಪಮತಿಯ ಶವವನ್ನು ಇರಿ ಸಲು ಆಜ್ಞಾಪಿಸಿದನು. ಅವಳ ಹಸ್ತದಿಂದಲೇ ತಾನು ಸಾಯುವೆನೆಂದು ಉಚ್ಚಿದನು. ಎಲ್ಲವೂ ಸಿದ್ಧವಾಯಿತು. ಅಂದು ಇಡೀ ಕೋಟೆಯ ಜನರೇ ನೆರೆದರು. ಆ ತೋಫಿನೆದುರು ನಿಂತು ಪ್ರಾರ್ಥನೆಯನ್ನು ಮಾಡಿದನು. ಇನ್ನೊಂದು ಜನ್ಮದಲ್ಲಿಯೂ ಅವಳು ತನಗೆ ಪತ್ನಿಯಾಗಿ ದೊರೆಯಲೆಂದು ಅಲ್ಲಾನನ್ನು ಕುರಿತು ಬಿನ್ನವಿಸಿಕೊಂಡನು. ಕೈಮುಗಿದು ಕಣ್ಣು ಮುಚ್ಚಿ ಕೊಂಡು ಕುಳಿತ ಕೂಡಲೇ ರೂಪಮತಿ ಶವವನ್ನೂ ಆ ತೋಫಿನಲ್ಲಿ ಹಾಕಿದರು. ಆ ಶವವನ್ನು ಒಳಗೆ ತುರುಕಿ ಅದರ ಬಾಗಿಲನ್ನು ಬಂದುಮಾಡಿದ ಕೂಡಲೇ ಆ ತೋಫು ಹಾರಿತು. ಆ ಗಂಭೀರ ಧ್ವನಿಯಲ್ಲಿ ಹೊಗೆಯ ಕಪ್ಪಿನಲ್ಲಿ ರಾಜನ ಎಲವುಗಳೆಲ್ಲಾ ಚೂರಾದವು. ಅವನ ಆ ದೇಹವನ್ನೇ ಆ ಗೋರಿಯಲ್ಲಿಟ್ಟು ಅದರ ಮೇಲೆ ರೂಪಮತಿಯ ದೇಹವನ್ನು ಹಾಕಿದ ಆ ತೋಫನ್ನಿಟ್ಟರು. ರಾಜನು ಸತ್ತರೂ ತನ್ನ ತಲೆಯ ಮೇಲೆ ಅವಳಿರಬೇಕೆಂಬ ಆಶೆಯಿತ್ತಂತೆ. ಅದಕ್ಕಂತಲೇ ಆ ಗೋರಿಯ ಮೇಲೆ ತೋಫಿದೆ. ರೂಪಮತಿಯು ಅದರಲ್ಲಿ

ಇನ್ನೂ ಬದುಕಿರುವಳೆಂದು ಅದನ್ನು ಬಾರಿಸಿದರೆ ಅದರಿಂದ ಧ್ವನಿ ಹೊರಡು ತ್ತದೆ. ಕೆಳಗಿನ ಗೋರಿ ಅದಕ್ಕೆ ತಲೆದೂಗುತ್ತದೆ. ಅವರ ಜೀವನದ ವಾಸನೆಗಳೇ ಇಂದಿಗೂ ಅಲ್ಲಿ ನಿಂತಿವೆ. ಅವು ಭೂತಗಳೆಂದು ಕೆಲವರು ಅನ್ನುತ್ತಾರೆ. ಏನೇ ಆದರೂ ಆ ತೋಫಿನಲ್ಲಿ ಅಡಗಿದ ಮಂಜುಳ ಧ್ವನಿ ಯನ್ನು ಇಂದಿಗೂ ಆಲಿಸಬಹುದು. ಹಳ್ಳಿಗರ ಹೇಳಿಕೆ ನನಗೆ ನಿಜವೆನಿಸಿತು. ನೂರಾರು ಜನರು ಮಾಂಡೂ ಕೋಟೆಯನ್ನು ನೋಡಲು ಹೋಗುತ್ತಾರೆ. ಹೋದಾಗ ಶಿಲಾಗೋರಿಯನ್ನಾಗಲೀ, ತೋಫನ್ನಾಗಲೀ ನೋಡದೇ ಬರು ವಂತಿಲ್ಲ! ಅವರಿಬ್ಬರ ಪ್ರಣಯ ಕಥೆ ನೆನೆಯದಲೆ ಬರುವಂತಿಲ್ಲ! ಅಂತಲೇ ಕಲ್ಲುಗೋರಿಯೆಂದರೆ ಮಾಂಡೂ ಕೋಟೆಯ ವೈಶಿಷ್ಟ್ಯ.

---

# ಜೋಡು ಗೋರಿ

ಸುವರ್ಣಪುರದಲ್ಲಿ ಅಥವಾ ಸವಣೂರಲ್ಲಿ ಪೂರ್ವದ ಬಾದಶಹರ ಗೋರಿಯೊಂದಿದೆ. ಬಹು ಸುಂದರವಾಗಿ ಕಲ್ಲಿನಲ್ಲಿ ಕಟ್ಟಿದ್ದಾರೆ. ಅದರ ಬದಿಯಲ್ಲಿಯೇ ಅಷ್ಟೇ ಸುಂದರವಾದ ಹಿಂದೂ ಸಂನ್ಯಾಸಿಯೊಬ್ಬನ ಸಮಾಧಿಯಿದೆ. ಸಮಾಧಿಯ ಮುಂದೆ ದೀಪವನ್ನು ಹಚ್ಚಿದರೆ ಗೋರಿಯ ಎದುರು ಧೂಪವನ್ನು ಹಾಕುತ್ತಾರೆ. ಆ ಗೋರಿಯ ಆರಾಧಕರು ಯವನರಾದರೂ, ಆ ಸಮಾಧಿಗೆ ಗೋರಿಗಿತ್ತಷ್ಟೇ ಮಾನವನ್ನೀಯುತ್ತಾರೆ. ಒಂದೇ ಮಾರಿನಂತರದಲ್ಲಿ. ಒಂದೇ ಕಟ್ಟಡದ ಅಡಿಯಲ್ಲಿ ಮುಸಲ್ಮಾನ್ ಬಾದಶಹರ ಗೋರಿಯ ಬಳಿ, ಹಿಂದೂ ಸಂನ್ಯಾಸಿಯೊಬ್ಬನ ಸಮಾಧಿಯಿದ್ದುದು ಕೇವಲ ಸವಣೂರೊಂದರಲ್ಲಿ, ಮಾತ್ರ! ದೊರೆಯ ಪ್ರೀತ್ಯರ್ಥವಾಗಿ ಪ್ರತಿ ವರುಷವೂ ಆ ಗೋರಿಯ ಬಳಿ ಜಾತ್ರೆ ನೆರೆಯುತ್ತದೆ. ಅಂದು ಆ ಗೋರಿಗೆ ಸಿಕ್ಕಷ್ಟೇ ಪ್ರಾಧಾನ್ಯವು ಆ ಸಮಾಧಿಗೂ ದೊರೆಯುತ್ತದೆ. ಶಿಲಾಶಾಸನಗಳ ಮೇಲಿಂದ ಸವಣೂರಲ್ಲಿ ಜೈನರ ಬಸದಿಗಳಿರಬೇಕೆಂಬ ಕಲ್ಪನೆಯು ಬಹು ಜನರಿಗೆ ಆಗಿದೆ. ಆದರೆ ಅಲ್ಲಿ ಯಾವ ಜೈನರ ಕುರುಹುಗಳೂ ಇಲ್ಲ. ಪೂರ್ವದಿಂದಲೂ ಅದು ಮುಸಲ್ಮಾನರ ರಾಜ್ಯ. ರಾಜ್ಯದ ತುಂಬ ಮಸೀದೆಗಳಿವೆ. ಮಸೀದಿಗಳಷ್ಟೇ ದೇಗುಲಗಳಿವೆ. ಅಲ್ಲಲ್ಲಿ ಧರ್ಮಶಾಲೆ, ಅನ್ನಛತ್ರ, ಜಲಾಶಯಗಳೂ ಇದ್ದುವಂತೆ. ಇಂದು ಅವುಗಳ ಕುರುಹುಗಳನ್ನು ಮಾತ್ರ ಕಾಣಬಹುದು.

ಸವಣೂರ ನಗರದ ಬಳಿ ದೇಗುಲವೊಂದಿದೆ. ಅದು ಹೊರಗಿನಿಂದ ಮುಸಲ್ಮಾನರ ಮಸೀದೆಯಂತೆ ಕಂಗೊಳಿಸುತ್ತದೆ; ಆದರೆ ಒಳಗೆ ಹಿಂದೂ ದೇವತೆಯು ನಿಂತಿದ್ದಾಳೆ. ಸವಣೂರಲ್ಲಿ ಇಂತಹ ಇನ್ನೂ ಕೆಲವು ವೈಚಿತ್ರ್ಯ

ಗಳನ್ನು ನಾವು ಕಾಣಬಹುದು. ಪುರಾತನ ಕಾಲದಿಂದ ರಾಜ್ಯವು ಮುಸಲ್ಮಾನರ ಕೈಯಲ್ಲಿದ್ದರೂ, ಅನ್ಯಮತೀಯರು ಅಲ್ಲಿ ಸುಖದಿಂದಲೇ ಬಾಳಿದ್ದಾರೆ. ಬಾದಶಹರ ಗೋರಿಯ ಬಳಿ ಸಾಮಾನ್ಯ ಹಿಂದುವಿನ ಸಮಾಧಿ ಏಕೆ ನಿಂತಿದೆ? ಮುಸಲ್ಮಾನ ರಾಜ್ಯದಲ್ಲಿ ಹಿಂದೂ ದೇಗುಲಗಳು ಹೆಚ್ಚಾಗಿ ನಿಂತಿವೆ ಏಕೆ? ಹೊರಗಿನ ರಚನೆ ಯವನರ ಸಂಸ್ಕೃತಿಯಂತಿದ್ದರೂ ದೇಗುಲದೊಳಗೆ ಶುದ್ಧ ಭಾರತೀಯ ದೇವತೆ ಏಕೆ? ಸವಣೂರನ್ನು ಸುವರ್ಣಪುರವೆಂದೇಕೆ ಕರೆಯುವರು? ಇವುಗಳ ಬಗ್ಗೆ ನಾವು ಇತಿಹಾಸದಲ್ಲಾಗಲಿ ಅಥವಾ ಶಿಲಾಶಾಸನಗಳ ಮುಖಾಂತರವಾಗಿಯಾಗಲಿ ಏನನ್ನೂ ತಿಳಿದುಕೊಳ್ಳಲು ಸಾಧ್ಯವಿಲ್ಲ. ಆದರೆ ಅಲ್ಲಿಯ ಜನರ ಸ್ಮೃತಿಯಲ್ಲಿ ತಲತಲಾಂತರದಿಂದ ಬಂದ ಕಥೆಯನ್ನು ಕಲೆಹಾಕಿದರೆ, ಅವರ ಮಾತಿನ ಸತ್ಯಾಂಶವು ತಿಳಿಯುತ್ತದೆ.

ಬಹು ದಿವಸ ಭಾರತವನ್ನಾಳಿ ಅದರ ಸತ್ತ್ವವನ್ನು ಹೀರಿದವರು ಯವನರು. ಅವರಲ್ಲಿ ಅಕಬರನಂಥ ಒಬ್ಬಿಬ್ಬರು ಉತ್ತಮ ರಾಜರಾಗಿ ಹೋದವರೂ ಉಂಟು. ದಿಲ್ಲಿಯಲ್ಲಿ ಮುಸಲ್ಮಾನ ಬಾದಶಹರ ಚಕ್ರಾಧಿಪತ್ಯವು ನಡೆಯುತ್ತಿರುವಾಗ, ಸವಣೂರು ಒಂದು ಪಾಳಯ. ಸವಣೂರಿನ ಬಾದಶಹರು ದಿಲ್ಲಿಯ ಚಕ್ರವರ್ತಿಗಳ ಸಂಬಂಧಿಕರಾದುದರಿಂದ, ಇಲ್ಲಿಯ ಪಾಳೆಯಗಾರರಿಗೂ ಬಾದಶಹರೆಂಬ ಬಿರುದನ್ನು ಹಚ್ಚಿಕೊಳ್ಳಲು ಅನುಮತಿಯನ್ನಿತ್ತಿದ್ದರು. ಸವಣೂರು ೨೨ ಪ್ರಾಂತಗಳ ರಾಜಧಾನಿಯಿತ್ತು. ಸವಣೂರಿನ ನವಾಬ್ ಬಾದಶಹರಿಗೆ ಸ್ವತಂತ್ರತೆಯಿತ್ತು. ಅಂದು ಆಳುತ್ತಿದ್ದವರು ಸುಸ್ವಭಾವಿ ದಿಲೇರಜಂಗ್ ನವಾಬರು. ಅವರು ತುಂಬಾ ವಿನಯಿಗಳು, ಕ್ಷಮಾಶೀಲರು. ಪರಧರ್ಮಸಹಿಷ್ಣುಗಳು, ಉದಾರಿಗಳು—ಹೆಚ್ಚಾಗಿ ದಾನಿಗಳಿದ್ದರು. ಮೊನ್ನೆಯವರೆಗೂ ಸವಣೂರ ರಾಜ್ಯವು ನಡೆಯಲು ಅವರದೇ ಪುಣ್ಯವೆಂದು ಅಲ್ಲಿಯ ಪ್ರಜೆಗಳು ಆಡಿಕೊಳ್ಳುತ್ತಿದ್ದರು. ಬಾದಶಹರು ಸಾರ್ವಜನಿಕ ಹಿತ-ಸೇವೆಗಳಿಗಾಗಿ ಜೀವನವನ್ನೇ ಮುಡಿಪಾಗಿಟ್ಟಿದ್ದರು ಮಾಡಲು ಯಾವ ಕಾರ್ಯವಿಲ್ಲವೆಂದು ಯಾವ ಪ್ರಜೆಯೂ ನಿರುದ್ಯೋಗಿಯಾಗುವಂತಿಲ್ಲ. ಬೀದಿಯಲ್ಲಿ ಅಲೆದಾಡಿ ಯಾರೂ ಭಿಕ್ಷೆಯನ್ನು ಬೇಡುವಂತಿಲ್ಲ. ಹಸಿವೆಯಿಂದ ಯಾವ ವ್ಯಕ್ತಿಯೂ ಮರಣವನ್ನು ಹೊಂದುವಂತಿಲ್ಲ. ಆ ರಾಜ್ಯದ ರಾಜಧಾನಿಯಾವ

ಸವಣೂರಲ್ಲಿ ಒಂದು ಧರ್ಮಸಂಸ್ಥೆಯಿತ್ತು. ಬಾದಶಹರು ಅದರ ಸಂಸ್ಥಾಪಕರು. ನಗರದ ಗಣ್ಯರು ಅದರ ಪ್ರದಾತೃಗಳು. ಊರಲ್ಲಿ ಯಾರಾದರೂ ಭಿಕ್ಷೆ ಬೇಡಿದರೆ, ಭಿಕ್ಷುಕರನ್ನು ರಾಜದೂತರು ಕರೆದುಕೊಂಡು ಹೋಗಿ ಆ ಧರ್ಮಸಂಸ್ಥೆಗೆ ಕಳುಹುತ್ತಿದ್ದರು. ಆ ಸಂಸ್ಥೆಯ ಸಂಚಾಲಕರಾದ ಧರ್ಮದರ್ಶಿಗಳು, ಹಸಿದವರಿಗೆ ಮೊದಲು ಹೊಟ್ಟೆತುಂಬ ಅನ್ನವನ್ನು ಹಾಕಿ ಅನಂತರ ಅವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಬಳಿಕ ಅವರವರ ಮನೋಧರ್ಮಗಳನ್ನು ಅವಲೋಕಿಸಿ, ಅವರಿಗೆ ಯೋಗ್ಯ ವೃತ್ತಿಗಳನ್ನು ದಯೆಪಾಲಿಸಲಾಗುತ್ತಿತ್ತು. ಅಂಗಹೀನರನ್ನೂ ನಿಶ್ಶಕ್ತರನ್ನೂ ಆಜೀವವೂ ಸಂಸ್ಥೆಯೇ ಪೋಷಿಸುತ್ತಿತ್ತು. ಅದು ನಿರ್ಗತಿಕರ ಕಾಮಧೇನು. ಆ ಧರ್ಮದರ್ಶಿಗಳೆಂದರೆ ಬಾದಶಹನ ಸಚಿವರಿದ್ದಂತೆ! ಸವಣೂರಿನ ಬಾದಶಹರು, ನಿತ್ಯವೂ ಆ ಸಂಸ್ಥೆಗೆ ತಮ್ಮ ಸಂದರ್ಶನವನ್ನಿತ್ತು, ಅಲ್ಲಿಯ ಆಶ್ರಮವಾಸಿಗಳ ಯೋಗಕ್ಷೇಮವನ್ನು ವಿಚಾರಿಸದೆ ಎಂದೂ ಅನ್ನವನ್ನು ಸೇವಿಸುತ್ತಿರಲಿಲ್ಲ ದೊರೆಗಳದು ಧರ್ಮದರ್ಶಿಗಳ ಮೇಲೆ, ಅವರು ಹಿಂದುವಾದರೂ ತುಂಬಾ ಪ್ರೀತಿ ವಿಶ್ವಾಸ. ಅವರನ್ನು ವಿಚಾರಿಸದೆ ದೊರೆಗಳು ಎಂದೂ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಧರ್ಮದರ್ಶಿಗಳು ರಾಜಗುರುವಿದ್ದಂತೆ. ದೊರೆಗೆ ದೊರೆಯು ಬೇಕಾದ ಸನ್ಮಾನವನ್ನು ಧರ್ಮದರ್ಶಿಗಳಿತ್ತರೆ, ಧರ್ಮದರ್ಶಿಗಳಿಗೆ ರಾಜಗುರುವೆಂದು ಸಿಕ್ಕಬೇಕಾದ ಮಾನ-ಸನ್ಮಾನಗಳಲ್ಲಿ ಯಾವ ವ್ಯತ್ಯಯವೂ ಬರುತ್ತಿರಲಿಲ್ಲ. ದೊರೆಯು ಸದಾ ಶಾಕಾಹಾರಿ. ಅವರ ದೇಹವು ಯವನರ ವಂಶದಲ್ಲಿ ಉದ್ಭವಿಸಿದರೂ, ಹೃದಯದ ತುಂಬಾ ಅನ್ಯಧರ್ಮದ ಪ್ರೀತಿಯು ತುಂಬಿತ್ತು. ಎಂತಲೇ ಆ ದೇಗುಲವನ್ನು ಕಟ್ಟಿಸಿ ಅದಕ್ಕೆ ನಡೆದುಕೊಳ್ಳುತ್ತಿದ್ದರು.

ಬಹು ಸಂತೋಷದಿಂದ, ನಿತ್ಯವೂ ಬರುವಂತೆ ಬಾದಶಹರು ತಮ್ಮ ಅಶ್ವವನ್ನೇರಿ ಧರ್ಮಸಂಸ್ಥೆಗೆ ಬಂದರು. ಪ್ರಾಪ್ತವಯಸ್ಕರಾದ ಜ್ಯೇಷ್ಠಪುತ್ರರಿಗೆ ಯುವರಾಜ ಪಟ್ಟವನ್ನು ಕಟ್ಟಬೇಕಿತ್ತು. ಆ ಮಂಗಲ ಮಹೋತ್ಸವದ ವಿಚಾರವಿನಿಮಯಕ್ಕಾಗಿ ಇಂದು ಬಂದಿದ್ದರು. ಕುಶಲವಾರ್ತೆಯಾದ ಮೇಲೆ ಬಾದಶಹರು ರಾಜ್ಯದ ವಿಷಯವಾಗಿ—ಯುವರಾಜ ಪಟ್ಟಾಭಿಷೇಕದ ವಿಷಯವಾಗಿ—ಚರ್ಚಿಸಿದರು. ಧರ್ಮದರ್ಶಿಗಳಿಗೂ ದೊರೆಗಳ ವಿಚಾರವು ಯೋಗ್ಯ

ವೆನಿಸಿತು. ದೊರೆಗಳು ದುಡಿದು ದಣಿದದ್ದರಿಂದಲೂ, ವೃದ್ಧಾಪ್ಯದ ಮೂಲಕ ವಾಗಿಯೂ ತಮ್ಮ ಮಗನ ಮೇಲೆ ರಾಜ್ಯಭಾರದ ಹೊಣೆಗಳನ್ನು ಹೊರಿಸುವುದು ಧರ್ಮದರ್ಶಿಗಳಿಗೆ ಸರಿಕಂಡಿತು. ಬಾದಶಹರ ಆನಂದದಲ್ಲಿ ಧರ್ಮದರ್ಶಿಗಳೂ ಸಮಭಾಗಿಯಾದರು. ಮಾತಿಗೆ ಮಾತು ಹೊರಟು ದೊರೆಗಳು ಧರ್ಮದರ್ಶಿಗಳನ್ನು ವಿನಯಪೂರ್ವಕವಾಗಿ " ಸ್ವಾಮಿ, ಈ ಸಂಸ್ಥೆಗೆ ಇದುವರೆಗೂ ಹೆಚ್ಚಿಗೆ ದಾನ ಸಲ್ಲಿಸಿದವರಾರು ? " ಎಂದು ಕೇಳಿದರು.

ದಾನ ಮಾಡಿದ ದಾತೃವು ದಾನದ ಬಗ್ಗೆ ತಾನೇ ಗಳುಹಿಕೊಂಡರೆ ಅದರ ಫಲವು ಲಭಿಸುವುದಿಲ್ಲವೆಂದು ಧರ್ಮವು ಸಾರುತ್ತಿರುವಾಗ, ಬಾದಶಹರಿಗೇಕೆ ಇಂತಹ ದುರ್ಬುದ್ಧಿ ಬಂದಿತೆಂದು ಧರ್ಮದರ್ಶಿಗಳು ವಿವಂಚನೆಗೊಳಗಾದರು. ಕ್ಷಣಕಾಲ ತಡೆದು, ವ್ಯಾವಹಾರಿಕವಾಗಿ ಕೇಳಿರಬಹುದೆಂದು ಭಾವಿಸಿ, " ಸ್ವಾಮಿನ್, ದೈಹಿಕ, ಮಾನಸಿಕ, ಸಾಂಪತ್ತಿಕವಾಗಿ ನೀವೇ ಎಲ್ಲ ದಾತೃಗಳಲ್ಲಿ ಹಿರಿಯರು; ಆದರೆ........... ! " ಎಂದು ಹೇಳುವಾಗ ಕೊಂಚ ತಡೆದರು.

" ಆದರೆ....? ಧರ್ಮದರ್ಶಿಗಳದು ಬಾದಶಹರೆದುರು ಸಂಕೋಚವೆ ? " ದೊರೆಗಳು ಕೇಳಿದರು.

" ಇಲ್ಲ ಬಾದಶಹರೆ, ಕೇವಲ ಸಂಪತ್ತಿನ ದೃಷ್ಟಿಯಿಂದ ನೋಡಿದರೆ, ಖಾರದ ತಿರಕಪ್ಪನಾಯಕರು ತುಂಬಾ ಕೊಟ್ಟಿದ್ದಾರೆ. ಅವರದು ಸ್ತುತ್ಯದಾನ " ಎಂದು ಇದ್ದುದನ್ನು ವಿವರಿಸಿದರು.

" ಏನು ? ಅವರೆಷ್ಟು ಧನವನ್ನಿತ್ತಿದ್ದಾರೆ ? " ಆಶ್ಚರ್ಯಚಕಿತರಾಗಿ ಬಾದಶಹರು ಕೇಳಿದರು.

"ಒಂದು ಶತ-ಸಹಸ್ರ ಸುವರ್ಣದ ಮೋಹರುಗಳನ್ನವರು ಕೊಟ್ಟಿದ್ದಾರೆ. ಅವರು ತುಂಬಾ ಸಿರಿವಂತರು. ಮನೆಯಲ್ಲಿ ಕಾಳನ್ನು ತುಂಬುವ ಚೀಲದಲ್ಲಿ ಸುವರ್ಣದ ಹಾಗು ರಜತದ ಮೋಹರುಗಳನ್ನು ತುಂಬಿಟ್ಟಿದ್ದಾರೆ. ನಾಯಕರು ಚಿನಿವಾಲರಾದರೂ, ಉದಾರ ಮನಸ್ಸಿನವರು ! " ಧರ್ಮದರ್ಶಿಗಳು ವಸ್ತುಸ್ಥಿತಿಯನ್ನು ತೆರೆದಿಟ್ಟರು.

ಬಾದಶಹರು ಕಣ್ಣುಮುಚ್ಚಿ ಚಣಹೊತ್ತು ಮೌನವನ್ನು ಧರಿಸಿದರು. ಖಾರದ ತಿರಕಪ್ಪನಾಯಕರೆಂದರೆ ಆಗರ್ಭ ಶ್ರೀಮಂತರು ಅವರು ಅಷ್ಟು ದಾನ ಮಾಡಿದ್ದಕ್ಕಾಗಿ ದೊರೆಗಳು ಅನ್ಯಥಾ ಭಾವಿಸಲಿಲ್ಲ. ತಮ್ಮ ಪ್ರಜೆಯೊಬ್ಬನಿಗಿಂತಲೂ ತಾವು ಕಡಿಮೆ ದಾನ ಮಾಡಿದುದಕ್ಕೆ ವಿಷಾದಿಸಿದರು; ಕಣ್ಣನ್ನು ತೆರೆದು ಧರ್ಮದರ್ಶಿಗಳನ್ನು ದೃಷ್ಟಿಸಿ ನೋಡಿದರು. “ಸ್ವಾಮಿನ್, ನಾನು ಈ ಸಂಸ್ಥೆಗೆ ಒಂದು ಕೋಟಿ ಸುವರ್ಣದ ಮೋಹರುಗಳನ್ನು ಕೊಡಬೇಕೆಂದು ಬಯಸಿದ್ದೇನೆ” ಎಂದು ಹೇಳಿದರು. ಧರ್ಮದರ್ಶಿಗಳು ಶಿಷ್ಯರಿಂದ ಉದಕವನ್ನು ತರಿಸಿ ದಾನದ ವಚನವನ್ನು ದೃಢಪಡಿಸಿಕೊಂಡರು. ದೊರೆಗಳು ಈ ಮಹಾದಾನದ ಪ್ರತಿಜ್ಞೆಯನ್ನು ಮಾಡುವಾಗ, ಯಾವ ಪರಿವಾರದವರನ್ನೂ ವಿಚಾರಿಸಲಿಲ್ಲ. ಭಾಂಡಾರದಲ್ಲಿ ಎಷ್ಟು ಸಂಪತ್ತಿದೆಯೆಂದು ಗಣಿಸಲಿಲ್ಲ. ಸರಿ, ಪ್ರಸನ್ನಚಿತ್ತರಾಗಿ ಅಶ್ವವನ್ನೇರಿ ತಮ್ಮ ಹಾದಿಯನ್ನು ಹಿಡಿದು ಹೋಗಿಬಿಟ್ಟರು. ಧರ್ಮದರ್ಶಿಗಳು ಸ್ತಂಭೀಭೂತರಾದರು. ದೊರೆಗಳ ದಾನದ ಕಾರ್ಯವು ಸ್ತುತ್ಯವಾದರೂ ಅದರ ನಿರ್ವಹಣೆಯ ಹೊಣೆ ಹಾಗು ಅದರ ಪೂರ್ತಿಯ ಭಾರವು ಧರ್ಮದರ್ಶಿಗಳಿಗೆ ಅಶಕ್ಯವಾಗಿ ಕಾಣಹತ್ತಿದುವು. ಬಾದಶಹರು ಹೇಳಿದ ಮೇಲೆ ಅವಕ್ಕೆಲ್ಲಿಯ ಪ್ರತಿ ಮಾತು ?

ಮರುದಿವಸದಿಂದಲೇ ಬಾದಶಹರ ದಾನವು ಪ್ರಾರಂಭವಾಯಿತು. ಧರ್ಮದರ್ಶಿಗಳ ಸಲಹೆಯ ಮೇರೆಗೆ ಅಲ್ಲಲ್ಲಿ ಮಸೀದೆ, ದೇಗುಲ, ಅನ್ನಛತ್ರ, ಧರ್ಮಶಾಲೆ, ಜಲಾಶಯ ಹಾಗೂ ನಿರಾಶ್ರಿತರ ಆಶ್ರಮಗಳು ತಲೆಯೆತ್ತಿ ಸುಭಿಕ್ಷಮಯ ರಾಜ್ಯದಲ್ಲಿ ರಾಮರಾಜ್ಯವು ತಲೆದೋರಹತ್ತಿತು. ಮೊದಲೇ ಸುಖದಲ್ಲಿ ಲೋಲಾಡುತ್ತಿದ್ದ ಸವಣೂರಿನ ಪ್ರಜೆಗಳಿಗೆ ಮತ್ತಿಷ್ಟು ಸುಖವು ದೊರೆಯಹತ್ತಿತು. ಹಾಲಿನಲ್ಲಿ ಮಧುವು ಬೆರೆತಂತಾಯಿತು. ಆ ಆ ಪ್ರಾಂತಗಳ ಪ್ರಜೆಗಳ ಬಾಯಲ್ಲಿ ರಾಜನ ಕೊಂಡಾಟವೇ ಕೊಂಡಾಟ! ಅದರ ಜೊತೆಗೆ ಧರ್ಮದರ್ಶಿಗಳ ಸಾಹಸವನ್ನು ಹೊಗಳದೆ ಯಾರೂ ಇರುತ್ತಿರಲಿಲ್ಲ. ದೊರೆಗಳೇ ತಾವು ವ್ಯಯಿಸಿದ ಹಣದ ಲೆಕ್ಕವನ್ನು ಬರೆದಿಡುತ್ತಿದ್ದರು.

ಪ್ರಾಪ್ತವಯಸ್ಕರಾದ ರಶೀದ್‌ನವಾಬರಿಗೆ ಬಾದಶಹರು ಯುವರಾಜ್ಯಾಭಿಷೇಕವನ್ನು ಮಾಡಿ, ಬಹು ವಿಜೃಂಭಣೆಯಿಂದ ಸಮಾರಂಭವನ್ನು ನೆರವೇರಿ

ಸಿದರು ಹಸ್ತವನ್ನು ಚಾಚಿದವರಿಗೆ ಕನಕದ ನಾಣ್ಯವನ್ನಿತ್ತರು. ಬೇಡಿದವರಿಗೆ ವಸ್ತ್ರದ ದಾನವನ್ನಿತ್ತರು. ಅನ್ನದಾನಕ್ಕಂತೂ ಮಿತಿಯೇ ಇಲ್ಲ. ಪಟ್ಟಾಭಿಷೇಕವು ಕೊನೆಗೊಂಡ ಮೇಲೆ ಬಾದಶಹರ ಅನುಜ್ಞೆಯಂತೆ ಧರ್ಮದರ್ಶಿಗಳು ಯುವರಾಜನನ್ನು ಕುಳ್ಳಿರಿಸಿಕೊಂಡು ಉಪದೇಶ ಮಾಡಿದರು: "ಏನು, ರಾಜಶಯ್ಯೆಯೆಂದರೆ ಹೂವಿನ ಹಾಸಿಗೆಯಲ್ಲ. ಬಾಳಿನುದ್ದಕ್ಕೂ ಕಹಿಯೇ ಕಟ್ಟಿದೆ. ಕಸವನ್ನೇ ರಸವನ್ನಾಗಿ ಪರಿವರ್ತಿಸುವುದು ಉತ್ತಮ ದೊರೆಯ ಲಕ್ಷಣ. ದಾನ, ದಯೆ, ಕ್ಷಮಾ, ಶೀಲ ಹಾಗು ಸತ್ಯಗಳೇ ನಿನ್ನ ತಳಹದಿಯಾಗಬೇಕು. ನಿನ್ನ ತಂದೆಯವರ ಮಾರ್ಗದಲ್ಲಿ ನಡೆದು ಸವಣೂರು ರಾಜ್ಯದ ಯಶೋಭಿವೃದ್ಧಿಯನ್ನು ಕೋರಬೇಕು ಬಾದಶಹರ ನೇತೃತ್ವದಲ್ಲಿ ಶಿಕ್ಷಣ ಪಡೆದದ್ದರಿಂದ ನಿನಗೆ ಹೆಚ್ಚು ಹೇಳಲು ನಾನು ಅಶಕ್ತನು." ಎಂದು ಹೇಳಿದರು. ಯುವರಾಜರ ಮುಖವನ್ನು ನಿರೀಕ್ಷಿಸಿ ಧರ್ಮದರ್ಶಿಗಳು ಒಂದು ನಿಟ್ಟುಸಿರನ್ನು ಬಿಟ್ಟರು. ಅದೇಕೋ, ಧರ್ಮದರ್ಶಿಗಳಿಗೆ ದೊರೆಯಲ್ಲಿಯ ಸದ್ಗುಣಗಳು ಯುವರಾಜರಲ್ಲಿ ಇಲ್ಲವೆಂಬ ಸಂಶಯ ಬಂದಿತು. ರಸೀದ್ ನವಾಬರು ಯುವರಾಜರಾದ ಮೇಲೆ, ರಾಜ್ಯಭಾರದ ಹೊಣೆಗಳು ಒಂದೊಂದೇ ಬರಹತ್ತಿದವು. ಭಾಂಡಾರದ ಬೀಗ ಹಾಗೂ ರಾಜ್ಯದ ಮುದ್ರೆಗಳು ರಸೀದ್ ನವಾಬರ ಹಸ್ತವನ್ನು ನೇರಿದುವು.

ಬಾದಶಹರ ದಾನವು ಅವ್ಯಾಹತವಾಗಿ ನಡೆದೇ ಇತ್ತು. ರಾಜ್ಯಭಾಂಡಾರವೆಲ್ಲಾ ಬರಿದಾಗಿತ್ತು. ಒಂದು ದಿನದ ಲೆಕ್ಕವನ್ನೆಲ್ಲಾ ಎಣಿಸಿ ನೋಡಿ, ತಾವು ಇನ್ನೂ ದಶಲಕ್ಷ ಸುವರ್ಣ ಮೋಹರುಗಳನ್ನು ಕೊಡಬೇಕಾಗಿದೆಯೆಂದು ಲೆಕ್ಕ ತೆಗೆದರು. ಇತ್ತಕಡೆ ಯಾರೋ ಕುಹಕಿಗಳು "ಬಾದಶಹರು ಎಲ್ಲ ಹಣವನ್ನು ವ್ಯಯಿಸಿಬಿಟ್ಟಿದ್ದಾರೆ. ಧರ್ಮದರ್ಶಿಗಳ ಮಾತಿನ ಬಲೆಗೆ ಬಿದ್ದು ರಾಜ್ಯವನ್ನೇ ಕಳೆದುಕೊಳ್ಳುತ್ತಾರೆ" ಎಂದು ಯುವರಾಜರ ತಲೆಯಲ್ಲಿ, ನವಾಬ್ ದಿಲೇರಜಂಗರ ವಿಷಯಕ್ಕೆ ತಪ್ಪು ಕಲ್ಪನೆಯನ್ನು ಹಾಕಿದರು. ಈರೀತಿ ಬಾದಶಹರು ದಾನವನ್ನು ಮಾಡುತ್ತ ಹೊರಟರೆ, ಯುವರಾಜರ ಪಾಲಿಗೆ ಬರಿ ರಾಜ್ಯವೇ ಉಳಿಯುವುದೆಂದು ಅವರ ಮಿತ್ರರು ಹೇಳಹತ್ತಿದರು. ಯುವರಾಜರಿಗೂ ನಿಜವೆನಿಸಿತು. ಕ್ಷಣಹೊತ್ತು ವಸ್ತುಸ್ಥಿತಿಯನ್ನು ತೂಗಿನೋಡಿ,

ಒಂದು ನಿರ್ಣಯಕ್ಕೆ ಬಂದರು. ಅಂದಿನಿಂದಲೇ ಭಂಡಾರಿಗರಿಗೆ ತಮ್ಮ ಆಜ್ಞೆ ಯಿಲ್ಲದೆ ಒಂದು ಕವಡೆ ಸಹಿತ ಹೊರಕ್ಕೆ ಹೋಗಬಾರದೆಂದು ಹೇಳಿದರು. ರಾಜ್ಯದ ಪ್ರತಿನಿತ್ಯದ ವ್ಯವಹಾರದಲ್ಲಿ ಕಡಿತವು ಪ್ರಾರಂಭವಾಯಿತು. ಸೈನ್ಯದ ಸರದಾರರು, ದರಬಾರದ ಅಧಿಕಾರಿಗಳು, ಅರಮನೆಯ ಪರಿವಾರದವರು ತಮ್ಮ ಪಾಲಿನ ಹಣದಲ್ಲಿ ಕಡಿತದ ತೊಂದರೆಯನ್ನು ಅನುಭವಿಸಬೇಕಾಯಿತು. ಅಲ್ಲಲ್ಲಿ ಇದರ ಪ್ರತಿಕ್ರಿಯೆಯು ಸೂಕ್ಷ್ಮರೀತಿಯಲ್ಲಿ ಕಂಡುಬರಹತ್ತಿತು. ದೊಡ್ಡ ಬಾದ ಶಹರ ಕಾಲಕ್ಕೆ ಸುಖವನ್ನುಂಡು, ಅವರು ಜೀವಿಸಿರುವಾಗ ಯಾರೂ ಅವರ ವಿರೋಧಿಯಾಗಿ ವರ್ತಿಸಲು ಇಚ್ಛೆಪಡಲಿಲ್ಲ. ನಿತ್ಯದ ವ್ಯವಹಾರದ ಸೂತ್ರ ಚಾಲಕರು ಯುವರಾಜರಿದ್ದುದರಿಂದ, ಅವರಿಗೂ ರಾಜ್ಯಕಾರಭಾರದ ಸೂಕ್ಷ್ಮ ಬದಲಾವಣೆಗಳು ತಿಳಿದುಬರುತ್ತಿರಲಿಲ್ಲ.

ದರಬಾರವು ಸೇರಿದಾಗ ಬಾದಶಹರು ಬರುತ್ತಿದ್ದರು. ಅವರಿಗೇಕೋ ಒಂದು ಚಿಂತೆ ತಗುಲಿತ್ತು. ತಮ್ಮ ದಾನದ ಗುಂಗಿನಲ್ಲಿ ರಾಜ್ಯವನ್ನೇ ಮರೆ ತಂತೆ ಕಾಣುತ್ತಿದ್ದರು ರಾಜ್ಯದ ತುಂಬಾ ಯುವರಾಜರ ಗುಪ್ತಚಾರರು ಅಲೆ ದಾಡುತ್ತಿದ್ದರು. ಯಾರಾದರೂ ಯುವರಾಜರ ವಿಷಯಕ್ಕೆ ಅನ್ಯಥಾ ಮಾತ ನಾಡಿದರೆ, ಅವರಿಗೆ ರಾಜದಂಡವು ಕಾದಿರುತ್ತಿತ್ತು. ಇತ್ತಿತ್ತಲಾಗಿ ಬಾದಶಹ ರಿಗೆ ಸೂಕ್ಷ್ಮವಾಗಿ ಅದರ ಅರಿವಾಗಹತ್ತಿತು. ಅದನ್ನು ಎದುರಿಸುವ ಧೈರ್ಯ ವಿಲ್ಲದಾಯಿತು. ರಾಜ್ಯದ ತುಂಬಾ ತಂದೆ–ಮಕ್ಕಳಿಗೆ ವ್ಯಾಜ್ಯವೆಂದು ಯಾರಾ ದರೂ ಕೇಳಿದರೆ, ತಮ್ಮ ಶುಭ್ರಕೀರ್ತಿಗೆ ಕಲಂಕ ತಗಲುವುದೆಂದು ಮೌನ ವನ್ನೇ ಧರಿಸಿದರು. ಮತ್ತೆ ತಮ್ಮ ಶೇಷದಾನದ ಬಗ್ಗೆ ವಿಚಾರ ಮಾಡಹತ್ತಿ ದರು. ಭಂಡಾರದಿಂದ ಒಂದು ಚಿಕ್ಕ ಕಾಸೂ ದೊರೆಯದಾಯಿತು. ಮಗನಿಗೆ ಹೇಳಿ ಸಂಪತ್ತನ್ನು ಬೇಡುವ ಪ್ರವೃತ್ತಿಯು ಬಾದಶಹರ ಮನಸ್ಸಿಗೆ ಸಮಂಜಸ ವೆನಿಸಲಿಲ್ಲ.

ಚಿಂತೆಯ ಭಾರದಿಂದ ಬಾದಶಹರು ಹಾಸಿಗೆಯನ್ನು ಹಿಡಿದರು. ಅವರ ಅಸ್ವಾಸ್ಥ್ಯದ ವಾರ್ತೆ ರಾಜ್ಯದ ತುಂಬಾ ಹರಡಿತು. ಜನರು ತೀರ ವಿಮಂಚನೆ ಗೊಳಗಾದರು. ರಾಜ್ಯಕಾರಭಾರವು ದೊರೆಗಳ ಹೆಸರಿನಲ್ಲಿ ಸಾಗಿದರೂ, ಯುವರಾಜರದೇ ಪ್ರಮುಖ ಪಾತ್ರವಾಯಿತು. ಭೋಜನಶಾಲೆಗೆ ಹೋಗುವ

ತ್ರಾಣವಿರದ್ದಕ್ಕೆ, ಭೋಜನವು ಅಲ್ಲಿಗೇ ಬರಹತ್ತಿತು. ಸೇವಕನು ನಿತ್ಯದ ಪರಿಪಾಠದಂತೆ ಕನಕದ ಪಾತ್ರೆಗಳಲ್ಲಿ ಭೋಜನವನ್ನು ಸಿದ್ಧಪಡಿಸಿಕೊಂಡು ಬಂದಿಟ್ಟನು. ಬಾದಶಹರು ಯಾವುದೋ ಚಿಂತೆಯಲ್ಲಿ ಲೀನರಾಗಿದ್ದರಿಂದ, ಭೋಜನ ಬಂದದ್ದನ್ನೇ ನೋಡಲಿಲ್ಲ. ಸೇವಕನು ಮುಕ್ಕಾಲು ಘಂಟೆ ನಿಂತರೂ ಬಾದಶಹರು ಹಾಗೆಯೇ ಮಲಗಿದ್ದರು. ಕನಕದ ಹೂಜೆಯಿಂದ ಪರಿಚಾರಕನು ಮದಿರೆಯನ್ನು ಸುವರ್ಣ ಪಾತ್ರೆಗೆ ಹಾಕಿ ಸಪ್ಪಳವನ್ನು ಮಾಡಿದರೂ, ಬಾದಶಹರು ಕಣ್ಣನ್ನು ತೆರೆಯಲಿಲ್ಲ. ಶೂನ್ಯಮನಸ್ಕರಾಗಿ ಯಾವುದೋ ವಸ್ತುವಿನಲ್ಲಿ ದೃಷ್ಟಿಯನ್ನು ಹೊರಳಿಸಿ, ಸುಪ್ಪತ್ತಿಗೆಯ ಮೇಲೆ ಪವಡಿಸಿದ್ದರು. ಸೇವಕನು ನಿಂತುನಿಂತು ಹೋಗಿಬಿಟ್ಟನು.

ಅರ್ಧರಾತ್ರಿ ಸರಿದಾಗ ಬಾದಶಹರು ಕಂಗಳನ್ನು ತೆರೆದು ನೋಡಿದರೆ, ಎದುರಿಗೆ ಭೋಜನವಿತ್ತು. ಅರೆಮನಸ್ಸಿನಿಂದ ಇದ್ದುದನ್ನು ತಿಂದರು. ತಮಗೆ ಬೇಕಾದ ಪದಾರ್ಥವನ್ನು ಹೇಳಿ ಮಾಡಿಸಿಕೊಳ್ಳುವ ಸ್ವಾತಂತ್ರ್ಯವಿದ್ದರೂ, ತಾವೇ ಎಂದಿಗೂ ಅಂತಹ ಭೋಗಕ್ಕೆ ಆಶೆಪಡಲಿಲ್ಲ. ಭೋಜನ ಮುಗಿದ ಮೇಲೆ ಅವರ ತಲೆಯಲ್ಲಿ ವಿಚಾರವೊಂದು ಸುಳಿಯಿತು. ತಮ್ಮ ಅರಮನೆಯಲ್ಲಿ ಸಹಸ್ರಾರು ಕನಕದ ಪಾತ್ರೆಗಳಿವೆ. ಅವುಗಳನ್ನು ಧರ್ಮಸಂಸ್ಥೆಗೆ ಕೊಟ್ಟರೆ ತಮ್ಮ ವಚನದಲ್ಲಿ ಕೆಲವನ್ನಾದರೂ ಕೊಟ್ಟಂತಾಗುವುದೆಂದು ಭಾವಿಸಿದರು. ಮರುದಿವಸ ತಮ್ಮ ಗುಪ್ತಚಾರನೋರ್ವನನ್ನು ಕರೆದು, ಆ ಎಲ್ಲ ಪಾತ್ರೆಗಳನ್ನೂ ಧರ್ಮಸಂಸ್ಥೆಗೆ ಕಳಿಸಿದರು. ಇದೇ ರೀತಿ ಎರಡು ಮೂರು ದಿವಸಗಳು ಕಳೆದ ಮೇಲೆ, ಯುವರಾಜರ ಕಿವಿಗಳಿಗೆ ಈ ವಾರ್ತೆ ತಲುಪಿತು. ಅಂದೆಯೆ ಭೋಜನವು ರಜತ ಪಾತ್ರೆಗಳಲ್ಲಿ ಬರಲು ಪ್ರಾರಂಭವಾಯಿತು. ಅದೂ ಮಾಯವಾಗುವ ವಾರ್ತೆ ಬರಲು, ಭೋಜನವು ಮಣ್ಣಿನ ಪಾತ್ರೆಯಲ್ಲಿ ಬರಹತ್ತಿತು. ಅಂದು ಬಾದಶಹರು ಭೋಜನವನ್ನೇ ಮಾಡಲಿಲ್ಲ. ಇಪ್ಪತ್ತೆರಡು ಪ್ರಾಂತಗಳ ದೊರೆಗಳು ಮಣ್ಣಿನ ಪಾತ್ರೆಯಲ್ಲಿ, ತೀರ ದರಿದ್ರರಂತೆ ಭೋಜನವನ್ನು ಸ್ವೀಕರಿಸುವರೆಂಬುದನ್ನು ಕೇಳಿ ಜನರೆಲ್ಲರೂ ಮರುಗಿದರು.

ಆದೊಂದು ರಾತ್ರಿ ವಿಚಾರಿಸಿದರು. ಮರುದಿವಸವೇ ಬಾದಶಹರು, ತಮಗೆ ವಿಹಾರಕ್ಕೆ ಹೋಗುವ ಆಶೆಯಾಗಿದೆಯೆಂದು ಹೇಳಿದರು. ‘ತಂದೆ

ಯುವರು ರಾಜಧಾನಿಯನ್ನು ಬಿಟ್ಟುಹೋದರೆ, ಧರ್ಮಸಂಸ್ಥೆಗೆ ಕೊಡುವುದು ತಪ್ಪುವುದಲ್ಲಾ !' ಎಂಬ ಸಂತೋಷದಿಂದ ರಶೀದ್ ನವಾಬರು ಒಮ್ಮೆಲೆ ಎಲ್ಲ ಸಿದ್ಧತೆಗಳನ್ನು ಮಾಡಿಕೊಟ್ಟರು ಬಾದಶಹರು, ತಮ್ಮ ಆಪ್ತಕಾರ್ಯದರ್ಶಿ ಹಾಗೂ ಪರಿಚಾರಕರನ್ನು ಬಿಟ್ಟು ಬೇರೆ ಯಾವ ಅರಮನೆಯ ಅಧಿಕಾರಿ ಗಳನ್ನೂ ಕರೆದುಕೊಂಡು ಹೋಗಲು ಸಮ್ಮತಿಸಲಿಲ್ಲ. ಸರಿ, ಪ್ರಯಾಣದ ಸಿದ್ಧತೆಯಾದ ಮೇಲೆ ಬಾದಶಹರು ಯುವರಾಜರನ್ನು ತಾವೇ ಮಾತನಾಡಿಸಿ ಹೊರಟರು. ಮೂರು ತಿಂಗಳ ಪರ್ಯಂತರವಾಗಿ ಸುತ್ತಾಡಿ, ಪುನಃ ಸವಣೂ ರಿಗೆ ಬಂದಿಳಿದರು. ಬಂದಿಳಿದಾಗ ಬಾದಶಹರು ಪ್ರಸನ್ನಚಿತ್ತರಿದ್ದರು. ಬಂದ ವರೇ ಧರ್ಮಸಂಸ್ಥೆಗೆ ಹೋಗಿಬಂದರು. ಆಪ್ತಕಾರ್ಯದರ್ಶಿಗೆ ಏನನ್ನೋ ಹೇಳಿದರು. ಅರಮನೆಯನ್ನೆಲ್ಲಾ ಸುತ್ತಾಡಿ ಬಂದರು. ಪರಿವಾರದವರನ್ನೆಲ್ಲ ತಾವೇ ಮಾತನಾಡಿಸಲು ಪ್ರಾರಂಭಿಸಿದರು. ಯುವರಾಜರ ಬಳಿ ತೆರಳಿ, ರಾಜ್ಯದ ಎಲ್ಲ ವಾರ್ತೆಗಳನ್ನು ಕೇಳಿ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ದರು. ಕೆಲವರಿಗೆ, ಪ್ರಯಾಣದಿಂದ ಕಳೆದುಹೋದ ಬಾದಶಹರ ಸಂತಸವು ಮರಳಿ ಬಂದಿದೆ ಎಂಬ ಅರಿವಾಯಿತು. ಅಂದು ಎಲ್ಲರೊಡನೆಯೂ ಪಙ್ಕ್ತಿ ಭೋಜನವನ್ನು ಸ್ವೀಕರಿಸಿದರು. ಮಸೀದೆಗೆ ತೆರಳಿ ಅಲ್ಲಾನಿಗೆ ಪ್ರಾರ್ಥನೆ ಯನ್ನು ಸಲ್ಲಿಸಿ ಬಂದರು. ಅವರು ತಮ್ಮ ಆಯುಷ್ಯದಲ್ಲಿಯೇ ಮಾಡಲಾರ ದಷ್ಟು ಕಾರ್ಯಗಳನ್ನು ಅಂದು ಪೂರಯಿಸಿದರು.

ಮರುದಿವಸ ಭಟ್ಟಂಗಿಗಳು ಬಾದಶಹರ ಸ್ತುತಿ ಮಾಡಿ ಅರ್ಧ ಘಂಟೆ ಯಾದರೂ ಬಾದಶಹರು ಹೊರಬರಲಿಲ್ಲ. ಪರಿಚಾರಕರು ಪ್ರಾತಃಕಾಲದ ವಿಧಿ ಗಾಗಿ ಎಲ್ಲ ಸಿದ್ಧತೆ ಮಾಡಿ ನಿಂತರೂ, ದೊರೆಗಳ ಆಗಮನವೇ ಇಲ್ಲ. ಸೂರ್ಯನು ಒಂದು ಮಾರು ಏರಿ ನೆತ್ತಿಯ ಮೇಲೆ ಬಂದಾಗ, ಯುವರಾಜರಿಗೆ ಈ ವಾರ್ತೆ ತಿಳಿಯಿತು. ಬಾದಶಹರ ಕೋಣೆಯಲ್ಲಿ ಹೋಗಿ ನೋಡುತ್ತಾರೆ. ಏನಿದೆ ? ವಿಷಪ್ರಾಶನ ಮಾಡಿ ಅವರು ಜೀವನಯಾತ್ರೆಯನ್ನು ಪೂರಯಿಸಿ ಬಿಟ್ಟಿದ್ದಾರೆ. ಜನವೆಲ್ಲವೂ ನೆರೆಯಿತು. ಬಳಿಯಲ್ಲಿ ಅವರದೇ ಹಸ್ತಲಿಖಿತ ಚೀಟಿಯೊಂದಿತ್ತು: " ನಾನು ಧರ್ಮಸಂಸ್ಥೆಗೆ ಒಂದು ಕೋಟಿ ಸುವರ್ಣದ ಮೋಹರುಗಳನ್ನು ಕೊಡುವ ವಾಗ್ದಾನವನ್ನು ಮಾಡಿದ್ದೆ. ಆದರೆ ನನ್ನ ಮಗನು ಯುವರಾಜ

ನಾದ ಮೇಲೆ ನನಗೆ ಒಂದು ಕವಡೆ ಕೂಡ ದೊರೆಯದಾಯಿತು. ನನ್ನ ವಚನ ವನ್ನು ಪೂರಯಿಸದೆ ಹೋಗಿದ್ದರೆ ನಾನು ನರಕಕ್ಕೆ ಹೋಗಬೇಕಿತ್ತು. ಅದಕ್ಕೆ ನನ್ನ ರಾಜ್ಯವನ್ನು ದಿಲ್ಲಿಯ ಸಮ್ರಾಟರಿಗೆ ಅಡವು ಹಾಕಿ, ಹಣವನ್ನು ದಾನ ಕ್ಕಾಗಿ ಕೊಟ್ಟಿದ್ದೇನೆ. ನನ್ನ ದಾನದ ವಚನವು ಪೂರ್ತಿಯಾದ ಮೇಲೆ ನನಗೆ ಮರಣವು ಅಷ್ಟೊಂದು ಭೀತಿಯದಾಗಿ ತೋರಲಿಲ್ಲ. ನನ್ನ ಸಾವಿಗೆ ನಾನೇ ಹೊಣೆ. —ಬಾದಶಹ" ಯುವರಾಜರು ಇದನ್ನೋದಿ ತಪ್ತರಾದರು. ಇದೆಲ್ಲದಕ್ಕೂ ಧರ್ಮದರ್ಶಿಗಳೇ ಕಾರಣರೆಂದು ಅವರ ಮೇಲೆ ಕೋಪ ಗೊಂಡರು. ಯಥೋಚಿತವಾಗಿ ಬಾದಶಹರ ಕೊನೆಯ ಯಾತ್ರಾಸಮಾರಂಭ ವನ್ನು ನೆರವೇರಿಸಿದರು.

ಮುಂದೆ ನಾಲ್ಕೇ ದಿನಗಳಲ್ಲಿ ದಿಲ್ಲಿಯ ಅಧಿಕಾರಿಗಳು ಬಂದು, ರಾಜ ಧಾನಿಯನ್ನು ಹೊಕ್ಕು, ಎಲ್ಲ ಸೂತ್ರಗಳನ್ನೂ ವಶಪಡಿಸಿಕೊಂಡರು. ಧರ್ಮ ದರ್ಶಿಗಳು ಯುವರಾಜರನ್ನು ಕರೆಯಿಸಿಕೊಂಡು ಸಾಂತ್ವನಗೊಳಿಸಿದರು. ಅವ ರಿಗೂ ನಿಜಕ್ಕೂ ಬಾದಶಹರು ಮಾಡಿದ ಕಾರ್ಯದ ಅರಿವಿರಲಿಲ್ಲ. ಆದರೆ ಯುವರಾಜರು ಹಾಗೂ ಅವರ ಅನುಯಾಯಿಗಳು ಈ ಕಾರಸ್ಥಾನದ ಹೊಣೆ ಯನ್ನು ಧರ್ಮದರ್ಶಿಗಳ ಮೇಲೆ ಹೊರಸಿದ್ದರು. ಬಾದಶಹರ ರಾಜ್ಯವನ್ನು ಕಳೆದ ಧರ್ಮದರ್ಶಿಗಳನ್ನು ಕೊಂದಾದರೂ ಸೇಡನ್ನು ತೀರಿಸಿಕೊಳ್ಳಬೇಕೆಂದು ಯುವರಾಜರು ಬಯಸಿದರು.

ಅತ್ತ ಧರ್ಮದರ್ಶಿಗಳು ತಮ್ಮ ಸಂಸ್ಥೆಯ ಸಂಪತ್ತನ್ನೆಲ್ಲಾ ಕಲೆಹಾಕಿ, ತಮ್ಮ ಕಾರ್ಯದರ್ಶಿಯನ್ನು ಅಧಿಕಾರಿಗಳ ಬಳಿ ಕಳಿಸಿದರು. ಅಧಿಕಾರಿಗಳು ಧರ್ಮದರ್ಶಿಗಳನ್ನು ಕರೆದು ವಸ್ತುಸ್ಥಿತಿಯನ್ನು ವಿವರಿಸಿದರು. ಬಾದಶಹರು ಅಪಾರ ಸಂಪತ್ತನ್ನು ಇಸಿದುಕೊಂಡಿದ್ದರಂತೆ. ಯುವರಾಜರು ಸಮಯ ಸಾಧಿಸಿ ಧರ್ಮದರ್ಶಿಗಳ ಭೋಜನದಲ್ಲಿ ವಿಷವನ್ನು ಬೆರಸಿಗರು. ಅಂದು ರಾತ್ರಿಯೆ ಧರ್ಮದರ್ಶಿಗಳು ಸಂಕಟಪಡತ್ತಿದರು. ಯುವರಾಜರನ್ನು ಕರೆದು ಏನೋ ಹೇಳಬೇಕೆಂದು ಬಯಸಿದರು. ಬಾಯಿಯೇ ಹೋಯಿತು. ಅಷ್ಟರಲ್ಲಿ ದಿಲ್ಲಿಯ ಅಧಿಕಾರಿಗಳ ಸೇವಕನೊಬ್ಬನು ಬಂದು, ಯುವರಾಜರ ಕೈಯಲ್ಲಿ ಕಾಗದವೊಂದನ್ನಿತ್ತನು ಅದರಲ್ಲಿ ಬರೆದಿತ್ತು :— "ನಿಮ್ಮ ಪರವಾಗಿ

ಬಂದ ಹಣವನ್ನು ಸ್ವೀಕರಿಸಿದ್ದೇವೆ. ನಾವಿತ್ತ ಹಣದ ಮುಕ್ಕಾಲು ವಾಲು ಈ ಹಣವಿದೆ. ಆದಕ್ಕೆ ನಿಮ್ಮ ೨೨ ಪ್ರಾಂತಗಳ ರಾಜ್ಯವನ್ನು ನಿಮಗೆ ಒಪ್ಪಿಸುವುದು ಸಾಧ್ಯವಿಲ್ಲ. ಆದಕ್ಕೆ ೨೨ ಗ್ರಾಮಗಳ ರಾಜಧಾನಿಯನ್ನು ಈ ಸವಣೂರನ್ನೇ ಮಾಡಿ ನಿಮಗೆ ಕೊಟ್ಟಿದ್ದೇವೆ. ಮೊದಲಿನಂತೆ ನಿಮ್ಮನ್ನು ಮನ್ನಿಸುತ್ತೇವೆ.

ಯುವರಾಜರು ಆಶ್ಚರ್ಯಚಕಿತರಾದರು. ಯಾರು ಹಣವನ್ನು ಕೊಟ್ಟು ಕಳಿಸಿದರೆಂದು ಅನಂತರ ತಿಳಿಯಿತು. ಆದರೆ ಮಾಡುವುದೇನು? ಧರ್ಮದರ್ಶಿಗಳು ಪ್ರಾಣವನ್ನು ಬಿಟ್ಟಿದ್ದರು. ಅವರ ಮರಣಕ್ಕೆ ತಾವೇ ಕಾರಣರು. ಧರ್ಮಸಂಸ್ಥೆಯಲ್ಲಿ ಅಪಾರ ಧನವಿರಬೇಕೆಂಬ ಕಲ್ಪನೆಯಿತ್ತು. ಅಲ್ಲದೆ ಧರ್ಮದರ್ಶಿಗಳು ಎಂತಹ ತ್ಯಾಗ ಮಾಡಿರುವರೆಂಬ ಅರಿವು ಯುವರಾಜರಿಗೆ ಪೂರ್ಣವಾಯಿತು. ತಮಗೆ ಬಂದ ಆ ರಾಜ್ಯವು ಧರ್ಮದರ್ಶಿಗಳ ಪುಣ್ಯವೆಂದೇ ಭಾವಿಸಿದರು. ಅವರಿಗೆ ಪಶ್ಚಾತ್ತಾಪವಾಯಿತು. ಆ ಧರ್ಮದರ್ಶಿಗಳ ಶವವನ್ನು, ತಮ್ಮ ತಂದೆಯವರ ಗೋರಿಯ ಬಳಿಯಲ್ಲಿಯೇ ಸಮಾಧಿಯನ್ನು ನಿರ್ಮಿಸಿ ಹೂಳಿಟ್ಟರು.

ಯುವರಾಜರು ತಮ್ಮ ತಂದೆಯವರ ಗೋರಿಗಿಂತಲೂ ಆ ಸಮಾಧಿಗೆ ಮಾನವನ್ನು ಹೆಚ್ಚು ಕೊಡಹತ್ತಿದ್ದರು. ಅವರು ತೀರಿದ ಮೇಲೆ, ಆ ಧರ್ಮಸಂಸ್ಥೆಯಲ್ಲಿ ಚಿಕ್ಕ ಕಾಸೂ ಇದ್ದಿರಲಿಲ್ಲ. ಯುವರಾಜರೇ ನಿಧಿಯನ್ನು ಸಂಗ್ರಹಿಸಿ, ಆ ಎರಡೂ ಗೋರಿಯ ಬಳಿ ಜಾತ್ರೆ ನೆರೆಯುವಂತೆ ಮಾಡಿದರು. ಅಂದಿನಿಂದಲೇ ರಾಜ್ಯವು ೨೨ ಪ್ರಾಂತಗಳ ಬದಲು ೨೨ ಗ್ರಾಮಗಳದಾಯಿತು. ಮೊನ್ನೆ ವಿಲೀನ ಪೂರ್ವದಲ್ಲಿ ರಾಜ್ಯವು ೨೨ ಗ್ರಾಮಗಳದಿತ್ತು. ಅಲ್ಲದೆ ರಾಜ್ಯದ ತುಂಬಾ ದೊರೆಗಳು ಕಟ್ಟಿಸಿದ ದೇಗುಲ, ಮಸೀದೆ, ಜಲಾಶಯಗಳು ಇಂದಿಗೂ ನಿಂತಿವೆ. ಅಂದಿನ ಆ ಸುವರ್ಣ ಮೊಹರುಗಳ ಕಥೆಯಿಂದಲೇ ಸವಣೂರಿಗೆ ಸುವರ್ಣಪುರವೆಂಬ ಹೆಸರು ಬಂದಿದೆ.

ಗೋರಿಗೆ ಸಿಕ್ಕಷ್ಟು ಸನ್ಮಾನವು ಸಮಾಧಿಗೆ ದೊರೆಯುತ್ತದೆ. ಕೆಲವರು ಆವೆರಡೂ ಗೋರಿಗಳೆಂದೇ ಮಾನವನ್ನೀಯುತ್ತಾರೆ. ಆದರೆ ಅವುಗಳನ್ನು ಪೂಜಿಸುವಾಗ ನಾವು ನೋಡಿದರೆ, ಒಂದನ್ನು ಹಿಂದುಗಳ ಪದ್ಧತಿ

ಯಂತೆ, ಇನ್ನೊಂದನ್ನು ಮುಸಲ್ಮಾನ್ ಪದ್ಧತಿಯಂತೆ ಪೂಜಿಸುತ್ತಾರೆ. 'ಅದು ಹೀಗೇಕೆ ?' ಎಂದು ಕೇಳಿದರೆ, ಅದು ಪರಂಪರೆಯೆಂದು ಅನ್ನುತ್ತಾರೆ. ಇನ್ನೂ ಆ ಜೋಡು ಗೋರಿಗಳು ನಿಂತಿವೆ. ಹಿಂದೂ ಹಾಗು ಮುಸಲ್ಮಾನರು ಸೇರಿ ಆ ಜಾತ್ರೆಯನ್ನು ಇಂದಿಗೂ ಪೂರಯಿಸುತ್ತಾರೆ. ಅಲ್ಲಿ ಯಾವ ಜಾತಿ ಭೇದಕ್ಕೂ ಆಸ್ಪದವಿಲ್ಲ. ಆ ಸವಣೂರಿನ ಜೋಡು ಗೋರಿಗಳೆಂದರೆ, ಜಾತೀಯ ಸಮನ್ವಯವಿದ್ದಂತೆ. ಹಿಂದೂ ದೇವತೆಯನ್ನು ಸ್ಥಾಪಿಸಿ ಹೊರಗೆ ಯವನರ ರೀತಿಯಂತೆ ಕಟ್ಟಿದ ದೇಗುಲವು ಯುವರಾಜರ ಕೃತಿ. ಆ ಹಿಂದಿನ ಪರಂಪರೆಯ ಪ್ರತೀಕವೆಂದು ಅವರು ಅಂತಹ ದೇಗುಲವನ್ನು ಕಟ್ಟಿಸಿದರಂತೆ !

# ಹೊಲತಿ-ಕೋಟಿ

ಅಂದು ಕಾಲೇಜಿನಲ್ಲಿ ಹೊಲತಿಕೋಟಿಯ ಗ್ರಾಮಕ್ಕೆ ಹೋಗಬೇಕೆಂದು ನಾನಂದಾಗ ಅಲ್ಲಿ ನಾಲ್ಕೆಂಟು ಹುಲ್ಲು ಗುಡಿಸಲುಗಳನ್ನು ಬಿಟ್ಟು ಬೇರೆ ಏನಾದರೂ ಇದೆಯೇ ? ಎಂದೊಬ್ಬರು ಪ್ರಶ್ನಿಸಿದರು. ಭಗ್ನವಾದ ನಾಗೇಂದ್ರ ದೇವಾಲಯವನ್ನು ಬಿಟ್ಟು ಮತ್ತೇನಾದರೂ ಪ್ರೇಕ್ಷಣೀಯ ತಾಣಗಳುಂಟೆ ? ಎಂದು ಮತ್ತೊಬ್ಬರು ಕೇಳಿದರು. "ನಾವು ಹೋಗಬೇಕಿದ್ದರೆ, ಅಜಂತಾ, ಬೇಲೂರ ಅಥವಾ ಬಾದಾಮಿಗಳಂತಹ ಐತಿಹಾಸಿಕ ಸ್ಥಳಗಳಿಗೆ ಹೋಗಬೇಕರಿ" ಎಂದು ನಮ್ಮಲ್ಲಿಯ ಮಹೋದಯರೊಬ್ಬರು ರಾಗವೆಳೆದರು. ಪ್ರಾಚೀನ ದೇವಾಲಯಗಳನ್ನು ಕಂಡು ಅವುಗಳ ಇತಿಹಾಸವನ್ನು ಸರಿಯಾಗಿ ಗುರುತಿಸುವ ನಮ್ಮ ಪ್ರಿನ್ಸಿಪಾಲರು ಅಂದು ಬರಲೊಪ್ಪದಿದ್ದರೆ, ನಾವು ಹೊಲತಿ ಕೋಟಿಯನ್ನು ಹಾಗೂ ಅದರ ಹಿಂದೆ ಅಡಗಿದ ಇತಿಹಾಸವನ್ನು ಕಾಣುವದು ಸಾಧ್ಯವಿರುತ್ತಿರಲಿಲ್ಲ. ಅವರೊಡನೆ ಒಂದು ವಿಶಿಷ್ಟ ಸ್ವಭಾವದ ಜಾತಿಗೆ ಸೇರಿದ ನಾವೇ ಕೆಲವರು ಹೊಲತಿಕೋಟಿಗೆ ಹೊರಟೆವು.

"ಇಂದು ಹೊಲೆಯರಾಗಲಿ ಅಥವಾ ಕೋಟಿಯಾಗಲಿ ಇರದಿದ್ದರೂ ಅದಕ್ಕೆ ಹೊಲ್ಲತಿಕೋಟಿಯೆಂದು ಅದೇಕೆ ಕರೆಯುತ್ತಾರೆ" ಎಂದು ಸೋದರಿ ಪದ್ಮಾ ಕೇಳಿದಳು ಈ ಗ್ರಾಮದಲ್ಲಿ ಪಂಚಮರ ಮತ್ತು ಉಚ್ಚಕುಲದವರಲ್ಲಿ ಭೇದಭಾವವೇಕಿಲ್ಲ ? ಎಂದು ಕೇಳಿದರೆ ಆ ಗ್ರಾಮದ ವೃದ್ಧನೊಬ್ಬ ಅದಕ್ಕೆ ಪರಂಪರೆಯ ಪುಣ್ಯವೇ ಕಾರಣವೆಂದು ಅನ್ನುತ್ತಾನೆ. ಈ ಗ್ರಾಮದ ತುದಿಯಲ್ಲಿ ಭಗ್ನವಾದ ನಾಗೇಂದ್ರನ ದೇವಾಲಯ ಒಂದಿದೆ. ಅದರ ಗರ್ಭಗೃಹದಲ್ಲಿ ಸರ್ಪ ಕಚ್ಚಿದವರನ್ನು ಹಾಕಿ ದ್ವಾರಗಳನ್ನು ಮುಚ್ಚಿದರೆ ವಿಷ ಇಳಿದು

ಅವರು ಸಜೀವರಾಗುತ್ತಾರೆಂಬ ವದಂತಿಯಿದೆ. ಅಂತಹ ಅನೇಕರನ್ನು ಆ ದೇವಾಲಯದಲ್ಲಿ ಹಾಕಿ ಸರ್ಪದ ವಿಷ ಇಳಿಸಿದ್ದನ್ನು ತಾನು ಕಂಡಿರುವುದಾಗಿ ಆ ವೃದ್ಧನು ಹೇಳುತ್ತಾನೆ. ಈ ಪುಣ್ಯದ ಕಾರ್ಯಕ್ಕೆ ಒಬ್ಬ ಹೊಲತಿಯೇ ಕಾರಣಳೆಂದು ಅವನು ಹೇಳಿದನು.

ಆ ದೇವಾಲಯವನ್ನು ನೋಡಲು ಹೋದಾಗ, ನಮ್ಮಲ್ಲಿಯ ಅನೇಕರಿಗೆ ಅದು ಅಷ್ಟು ಹಿಡಿಸಲಿಲ್ಲ. ಮತ್ತೆ ಪದ್ಮಾ ಕೇಳಿದಳು: "ಅಲ್ಲಣ್ಣಾ, ಪ್ರತಿ ಪ್ರಾಚೀನ ಶಿಲೆಗೂ ಒಂದು ಕತೆಯಿದೆ ಎಂದು ಹೇಳುತ್ತಿ. ಅಲ್ಲದೆ ಪುರಾತನ ದೇವಾಲಯಗಳ ಹಿಂದೆ ಪುರಾಣಗಳೇ ಇರುತ್ತವೆಂದು ನೀನು ಮಾತನಾಡುತ್ತಿ. ಈ ನಾಗೇಂದ್ರನ ದೇವಾಲಯದ ವೈಚಿತ್ರ್ಯವೇನು ?"

ಪದ್ಮಳ ಪ್ರಶ್ನೆ ಯಾವಾಗಲೂ ತರ್ಕಬದ್ಧವಾಗಿರುತ್ತದೆ. ನಾನೇ ಅವರನ್ನೆಲ್ಲ ಅಲ್ಲಿಗೆ ಕರೆದುಕೊಂಡು ಬಂದುದಕ್ಕೆ ಆ ವೃದ್ಧನನ್ನು ಹುಡುಕಿಕೊಂಡು ಬಂದು ಅವನಿಂದ ಹೊಲತಿಕೋಟೆಯ ತಲೆಯಿಂದ ತಲೆಗೆ ಜಾರಿಬಂದ ಇತಿಹಾಸದ ಕತೆಯನ್ನು ಹೇಳಿಸಿದೆ. ಪದ್ಮಳು ನನ್ನನ್ನು ಆ ರೀತಿ ಕೆಣಕದೆ ಹೋಗಿದ್ದರೆ ಆ ಹೊಲತಿಕೋಟೆಯ ಇತಿಹಾಸವು ಬಹುಶಃ ಪ್ರಕಟಿತವಾಗದೇ ಹೋಗಬಹುದಿತ್ತೇನೋ! ಸಹೋದರಿ ಪದ್ಮಳಿಗೆ ಅದರ ಶ್ರೇಯಸ್ಸು ಹೋಗಬೇಕು. ಆ ವೃದ್ಧನು ಬಹು ರಮ್ಯವಾಗಿ ಆ ಕೋಟೆಯ ಇತಿಹಾಸದ ಕತೆಯನ್ನು ಹೇಳಿದನು.

"ನಮ್ಮ ಹಿರಿಯರು ಹೇಳಿದ ಕತೆಯಿದು. ಮೂರು ತಲೆಮಾರುಗಳಾಚೆಯ ಕತೆಯಿದ್ದಿರಬೇಕು. ಈ ಹೊಲತಿಕೋಟೆಯ ಪೂರ್ವದ ಹೆಸರು ಬರೇ ಕೋಟೆಯೆಂದಿತ್ತು. ಕೋಟೆಯ ಪಾಳೆಯಗಾರರು ಶಿವಪ್ಪನಾಯಕರು ತುಂಬ ಬಿಗುವಿನ ವ್ಯಕ್ತಿ. ಶಿವಪ್ಪನಾಯಕರು ಎಷ್ಟು ಕೋಪಿಷ್ಠರಿದ್ದರೋ ಅಷ್ಟೇ ಉದಾರಿಗಳಿದರು. ಪ್ರೀತಿ ಬಂದು ಮುಕ್ತಹಸ್ತದಿಂದ ಸಂಪತ್ತನ್ನು ಕೊಡುವಾಗ ರಾಜ್ಯಭಾಂಡಾರವು ಬರಿದಾದರೂ ಲೆಕ್ಕಿಸುತ್ತಿದ್ದಿಲ್ಲ. ಹಾಗೆಯೇ ಯಾರಾದರೂ ತಪ್ಪಿ ನಡೆದಾಗ ತಲೆದಂಡ ಕಟ್ಟಿದರೆ ಅವರು ನಾಶವಾದರೂ ವ್ಯಸನಪಡುತ್ತಿರಲಿಲ್ಲ. ಪಾಳೆಯಗಾರರು ನಿತ್ಯವೂ ಕೋಟೆಯ ಕುಲದೇವರಾದ ನಾಗೇಂದ್ರನ ದೇವಾಲಯಕ್ಕೆ ಬರುವದು ಪರಿಪಾಠ. ತಪ್ಪದಲೆ ಪೂಜೆ, ಮಹಾಮಂಗಳಾರತಿ, ಪ್ರಸಾದವು ಆಗಲೇಬೇಕು. ಪಾಳೆಯಗಾರರಿಗೆ ಕುಲ

ದೇವರನ್ನು ಕಣ್ತುಂಬ ನೋಡಿ ಭಕ್ತಿಪೂರ್ವಕವಾಗಿ ಕೈಮುಗಿಯದೆ ಸಮಾಧಾನವಾಗುತ್ತಿರಲಿಲ್ಲ. ಕೇಳಿದವರಿಗೆ ಕೇಳಿದ್ದನ್ನು ಕೊಟ್ಟು ಭಕ್ತರ ಕೈವಾರಿಯೆನಿಸಿದ್ದರು ಪಾಳೆಯಗಾರ ಶಿವಪ್ಪನಾಯಕರು.

ಅವರಲ್ಲಿದ್ದ ಕೊರತೆಯೆಂದರೆ ಮಹಾರಾಜ್ಞಿಯೊಂದಿಗೆ ಬೇರೊಂದು ಶೂದ್ರರ ಹೆಣ್ಣಿನಲ್ಲಿ ಆಸಕ್ತರಾಗಿದ್ದುದು. ಪ್ರತಿದಿವಸ ರಾತ್ರಿಯ ಮೂರನೇ ಜಾವದಲ್ಲಿ ಅವಳ ಮನೆಗೆ ಹೋಗುತ್ತಿದ್ದರು. ಅವಳೂ ನಾಗೇಂದ್ರನ ಆರಾಧಕಳು. ಅವಳಿಗೆ ನಾಗೇಂದ್ರನು ಒಲಿದು ಪ್ರತ್ಯಕ್ಷನಾಗಿರುವನೆಂಬ ಪ್ರತೀತಿಯಿತ್ತು. ಕೋಟೆಯ ಜನರು ಶಿವಪ್ಪನಾಯಕರ ಹಾಗೂ ರಂಗನಾಯಕಿಯ ಸಂಬಂಧವನ್ನು ಕುರಿತು ಮಾತನಾಡಲು ಅಂಜುತ್ತಿದ್ದರು. ರಂಗನಾಯಕಿಯು ಪಂಚಮ ಕುಲದವಳಾಗಿದ್ದರೂ ನಾಗೇಂದ್ರನ ದೇವಾಲಯದಲ್ಲಿ ಪ್ರವೇಶವಿತ್ತು. ಕೋಟೆಯ ಪಾಳೆಯಗಾರರ ಪ್ರೀತಿಯ ಹೆಣ್ಣಾದಾಗ ಅವಳನ್ನು ಯಾರು ತಡೆಯಬೇಕು ? ಅಲ್ಲದೆ ಕೋಟೆಯ ಜನರು, ಅವಳಿಗೆ ನಾಗೇಂದ್ರನ ಸಾಕ್ಷಾತ್ಕಾರವಾಗಿರುವದೆಂಬುದರ ಪ್ರತೀತಿಯಿದ್ದುದರಿಂದ, ಅವಳ ವಿಷಯಕ್ಕೆ ಯಾವ ರೀತಿಯ ಪಾಪದ ಮಾತನ್ನೂ ಆಡುತ್ತಿರಲಿಲ್ಲ. ರಂಗನಾಯಕಿಯ ಸೌಂದರ್ಯದ ಬಗ್ಗೆ ಕೋಟೆಯಲ್ಲಿ ನೂರೆಂಟು ಕಥೆಗಳು ಹಬ್ಬಿದ್ದರೂ ಅವಳನ್ನು ನೋಡುವ ಭಾಗ್ಯವು ಯಾರಿಗೂ ಬಂದಿರಲಿಲ್ಲ. ಅವಳಿಗೆಂದೇ ಶಿವಪ್ಪನಾಯಕರು ಬಹು ಸುಂದರವಾದ ವಿಶಾಲ ಸೌಧ ಒಂದನ್ನು ಕಟ್ಟಿಸಿ ಕೊಟ್ಟಿದ್ದರು ಅವಳು ಅದನ್ನು ಬಿಟ್ಟು ಅಪರೂಪವಾಗಿ ಹೊರಕ್ಕೆ ಬಂದರೆ, ರೇಶಿಮೆಯ ತೆರೆ ಮುಚ್ಚಿದ ರಥದಲ್ಲಿ ಬರುತ್ತಿದ್ದಳು. ಶಿವಪ್ಪನಾಯಕರ ಬಾಳಿಗೆ ಮೀಸಲಾಗಿದ್ದರಿಂದ ಅವಳ ಸುಖವು ಬೇರಾರಿಗೂ ದೊರೆಯುವಂತಿರಲಿಲ್ಲ.

ಕೇದಿಗೆಯ ಕಾಂತಿಯನ್ನು ನಾಚಿಸುವಂತಹ ದೇಹವರ್ಣ, ದುಂಬಿಗಳು ಪುಷ್ಪಗಳೆಂದು ಭಾವಿಸಿ ಮುತ್ತುವಂತಿರುವ ತುಟಿಗಳು, ಸಂಪಿಗೆಯಂತಹ ನಾಸಿಕ, ಮಿಂಚುವ ಕಣ್ಣುಗಳು. ಇಂತಹ ಬಯಕೆಯ ಬೇಟೆಯಲ್ಲಿ ಬಲಿಯಾಗದ ಪುರುಷಾಮೃಗವೇ ಇದ್ದಿರಲಿಲ್ಲವೆನ್ನಬಹುದು. ಅವಳ ಸಹಜ ಸೌಂದರ್ಯಕ್ಕೆ ಮಾರುಹೋಗಿದ್ದ ಶಿವಪ್ಪನಾಯಕರು ರಂಗಾಸಾನಿಗೆ ಹತ್ತು ಸಹಸ್ರ ಕನಕಗಳನ್ನು ಕೊಟ್ಟಿದ್ದರಂತೆ. ಬಾಲ್ಯದಿಂದಲೇ ಶಿವಪ್ಪನಾಯಕರು ರಂಗಾ

ಸಾನಿಯನ್ನು ಒಲಿಸಿಕೊಂಡಿದ್ದರಿಂದ ಅವಳ ಪರಂಪರೆಯ ಬಾಳು ಬೇರೆ ದಾರಿ ಹಿಡಿಯಿತು. ಪಾಳೆಯಗಾರರು ಅವಳಿಗೆ ತಾಳಿ ಕಟ್ಟದೆ ಹೋದರೂ ಅವಳೊಡನೆ ಅಗ್ನಿಸಾಕ್ಷಿಯಾಗಿ ಕೈಹಿಡಿದ ಧರ್ಮಪತ್ನಿಗಿಂತಲೂ ಹೆಚ್ಚಿನ ಬಾಂಧವ್ಯವನ್ನು ಇಟ್ಟುಕೊಂಡಿದ್ದರು. ಅವರ ಪಾಲಿಗೆ ರಂಗನಾಯಕಿ ಪ್ರಿಯತಮೆಯಾಗಿರದೆ ನಲ್ಲಳ ರೂಪ ತಾಳಿ ಬಂದಿದ್ದ ದೇವತೆಯಾಗಿದ್ದಳು. ಪರಸ್ಪರರು ತಮ್ಮ ಹೃದಯಗಳನ್ನರ್ಪಿಸಿ ಪ್ರಣಯೋದ್ಯಾನದ ಪತಂಗಗಳಾಗಿ, ಸುಖ ಸಾಮ್ರಾಜ್ಯದಲ್ಲಿ ರಾಜರಾಣಿಯಾಗಿ ಮೆರೆಯುತ್ತಿದ್ದರು. ಪಂಚಮ ಕುಲದ ವೇಶ್ಯೆಯಾದ ಹೆಣ್ಣು ರಂಗಿ ಪಾಳೆಯಗಾರರ ಪದರಿನಲ್ಲಿ ಬೀಳದೆ ಹೋಗಿದ್ದರೆ ರಂಗನಾಯಕಿಯಾಗುತ್ತಿರಲಿಲ್ಲ. ರಾತ್ರಿಯಲ್ಲಿ ನಿತ್ಯವೂ ಅವಳು ನಾಗೇಂದ್ರನ ದೇವಾಲಯಕ್ಕೆ ಹೋಗುತ್ತಿದ್ದಳು. ಒಂದೊಂದು ಸಲ ಅವನೆದುರು ಕುಳಿತರೆ ರಾತ್ರಿಯೇ ಸರಿಯುತ್ತಿತ್ತು. ಇಷ್ಟು ಭಕ್ತಿ ಪ್ರೇಮಗಳನ್ನು ಆ ನಾಗೇಂದ್ರನ ಮೇಲಿಟ್ಟಿದ್ದಳು. ಅಂದಿನಿಂದ ಪಂಚಮರು ಕೋಟೆಯ ಇತರ ಪ್ರಜೆಗಳಷ್ಟೇ ಹಕ್ಕು ಬಾಧ್ಯತೆಗಳನ್ನು ಪಡೆಯುತ್ತ ಬಂದಿದ್ದಾರೆ.

ಅಜಾತಶತ್ರುವೆನಿಸಿದ ಶಿವಪ್ಪನಾಯಕರಿಗೆ ಹಿತಶತ್ರುವೆನಿಸಿದವನು ಅವರ ಸಾಕ್ಷಾತ್ ಸಹೋದರನಾದ ರಾಮನಾಯಕನೇ. ಹೇಗಾದರೂ ಮಾಡಿ ಶಿವಪ್ಪನಾಯಕರ ಗಾದಿಯನ್ನು ಏರಬೇಕೆಂದು ಬಯಸುತ್ತಿದ್ದನು. ಆ ಗಾದಿಗಿಂತಲೂ ಗಾದಿಯ ಒಡತಿಯೆಂದು ಕರೆಯಿಸಿಕೊಳ್ಳುತ್ತಿದ್ದ ರಂಗನಾಯಕಿಯ ಮೇಲೆ ಹೆಚ್ಚು ಅವನ ಮನಸ್ಸಿತ್ತು. ಒಮ್ಮೆ ಶಿವಪ್ಪನಾಯಕರು ಅಸ್ವಾಸ್ಥ್ಯದಿಂದ ಬಳಲುತ್ತಿರುವಾಗ ರಂಗನಾಯಕಿಯನ್ನು ಅರಮನೆಗೆ ಕರೆಸಿಕೊಂಡಿದ್ದರು. ಅವಳ ರೂಪರಾಶಿಯನ್ನು ನೋಡಿ ರಾಮನಾಯಕನು ಅವಳನ್ನು ಭೋಗಿಸಬೇಕೆಂದು ಇಚ್ಛೆ ಮಾಡಿದನು. ರಂಗನಾಯಕಿ ಜಾತಿಯಿಂದ ಪಂಚಮ ಕುಲದವಳಿದ್ದಿರಬಹುದು; ವೃತ್ತಿಯಿಂದ ವೇಶ್ಯೆಯಿದ್ದಿರಬಹುದು; ಆದರೆ ಆಚಾರ ವಿಚಾರಗಳಿಂದ ಅವಳೊಬ್ಬ ಆದರ್ಶ ಸ್ತ್ರೀಯಾಗಿದ್ದಳು ಶಿವಪ್ಪನಾಯಕರು ಬದುಕಿರುವವರೆಗೂ ತನ್ನಾಶೆ ಪೂರ್ತಿಯಾಗದೆಂದು ರಾಮನಾಯಕನಿಗೆ ಗೊತ್ತಿತ್ತು. ಅಂತಲೇ ಹೇಗಾದರೂ ಶಿವಪ್ಪನಾಯಕರನ್ನು ಹಾರಿಸಿ ತಾನೆ ಪಾಳೆಯದ ಪಟ್ಟವನ್ನೇರಿ ರಂಗನಾಯಕಿಯನ್ನು ಪಡೆಯಬೇಕೆಂದು ಸದಾ ದುಷ್ಟ ವಿಚಾರಗಳನ್ನೇ ಮಾಡುತ್ತಿದ್ದನು.

ಹೊಂಚು ಹಾಕಿ ಅದೊಂದು ರಾತ್ರಿ ಶಿವಪ್ಪನಾಯಕರು ನಿದ್ರೆಯಲ್ಲಿರುವಾಗ ಅವರ ಕಣ್ಣುಗಳೆರಡರಲ್ಲಿಯೂ ವಿಷವನ್ನು ಹಾಕಿಸಿದನು. ನಿದ್ರೆ ತಿಳಿದೆದ್ದಾಗ ಶಿವಪ್ಪನಾಯಕರ ದೃಷ್ಟಿಯು ನಶಿಸಿಹೋಗಿತ್ತು. ಅವರಿಗೆ ಅದರ ಕಾರಣವೇ ತಿಳಿಯಲಿಲ್ಲ. ಮಿಂಚಿನ ವೇಗದಿಂದ ವಾರ್ತೆ ಕೋಟೆಯಲ್ಲಿ ಹರಡಿದಾಗ ಎಲ್ಲರೂ ವಿಷಾದಪಟ್ಟರು. ಶಿವಪ್ಪನಾಯಕರ ಬಗೆಗೆ ಎಲ್ಲರಿಗೂ ಗೌರವವಿತ್ತು. ಇಂತಹ ಅನ್ಯಾಯವು ಹೇಗಾಯಿತೆಂದು ಅರಮನೆಯ ಪರಿವಾರಕ್ಕೆ ತಿಳಿಯಲಿಲ್ಲ. ಇದನ್ನು ನೋಡಿ ರಂಗನಾಯಕಿಗೆ ಬಹು ದುಃಖವಾಯಿತು. ಶಿವಪ್ಪನಾಯಕರು ಅಂಗಹೀನರಾಗಿ ಅರಮನೆಯಲ್ಲಿಯೇ ಇರಬೇಕಾಯಿತು. ಎಲ್ಲರ ದುಃಖಗಳಲ್ಲಿ ತಾನೂ ಪಾಲುಗಾರನಂತೆ ರಾಮನಾಯಕನೂ ನಟಿಸಿದನು. ಶಿವಪ್ಪನಾಯಕರು ಹೆಸರಿಗೆ ಅರಸರಾಗುಳಿದು ರಾಜ್ಯಸೂತ್ರಗಳೆಲ್ಲ ರಾಮನಾಯಕನ ಕೈಗೆ ಬಂದವು.

ರಾಜಮುದ್ರೆ, ರಾಜಭಾಂಡಾರ, ರಾಜ್ಯಭಾರ ಒಂದೊಂದೇ ರಾಮನಾಯಕನ ಹಸ್ತವನ್ನು ಸೇರತೊಡಗಿದವು. ಅಂಗಹೀನರಾದ ಅರಸು ಶಿವಪ್ಪನಾಯಕರು ಹೆಚ್ಚಿನ ಸಮಯವನ್ನು ನಾಗೇಂದ್ರ ಧ್ಯಾನದಲ್ಲಿ ಕಳೆಯಹತ್ತಿದರು. ರಾಜ್ಯದ ಬಗ್ಗೆ, ಪ್ರಜೆಗಳ ವಿಷಯಕ್ಕೆ ಮೇಲಿಂದ ಮೇಲೆ ಶಿವಪ್ಪನಾಯಕರು ತಮ್ಮ ಸೋದರನನ್ನು ವಿಚಾರಿಸುತ್ತಿದ್ದರು. ಎಲ್ಲವೂ ಸರಿಯಾಗಿ ಸಾಗಿದೆಯೆಂಬ ಸೊಲ್ಲೊಂದನ್ನು ಬಿಟ್ಟು ಬೇರೆ ಏನನ್ನೂ ರಾಮನಾಯಕ ಹೇಳುತ್ತಿರಲಿಲ್ಲ. ಬೋನಿಂದ ಜಾರಿದ ಹುಲಿಯಾಗಿದ್ದ ರಾಮನಾಯಕನ ಹಾವಳಿ ಕೋಟೆಯಲ್ಲಿ ಹಬ್ಬಿತು. ರಾಜ್ಯಭಾಂಡಾರದ ಕನಕವೆಲ್ಲ ಕರಗಿತು. ದುಷ್ಟ ಚೇತನಗಳಿಗೆ ಬಲಿಯಾಗಿದ್ದ ರಾಮನಾಯಕನು ಸಂಪತ್ತನ್ನು ಅನ್ಯಾಯ ಅಧರ್ಮಗಳಿಗೆ ಅಪವ್ಯಯ ಮಾಡಹತ್ತಿದನು. ಪ್ರಜೆಗಳ ಮೇಲೆ ಭಾರವಾದ ಕರವನ್ನು ಹೇರಿ ಅವರಿಗೆ ಸಂಕಷ್ಟಗಳನ್ನು ತಂದೊಡ್ಡ ಹತ್ತಿದನು. ಪ್ರಜೆಗಳ ದೂರು ದೊರೆಯ ವರೆಗೂ ಮುಟ್ಟದಂತೆ ವ್ಯವಸ್ಥೆ ಮಾಡಿದ್ದನು.

ರಂಗನಾಯಕಿಯ ಮೇಲೆ ರಾಮನಾಯಕನ ಕಣ್ಣು ಹರಿಯಿತು. ಬಹು ದಿನದಿಂದ ಕುದಿಯುತ್ತಿದ್ದ ಅವನ ಮನಸ್ಸು ಇಂದು ಸ್ತಿಮಿತಕ್ಕೆ ಬಂದಿತು. ರಂಗನಾಯಕಿಯ ಮಾನವನ್ನು ಬಯಸಿದರೆ ಕ್ಷಣಾರ್ಧದಲ್ಲಿ ಮಾರಬಹುದೆಂದು

ತರ್ಕಿಸಿದನು. ರಾಜ್ಯದಲ್ಲಿ ನಡೆಯುತ್ತಿದ್ದ ಅನ್ಯಾಯಗಳು ರಂಗನಾಯಕಿಯ ಕರ್ಣಗಳ ವರೆಗೆ ಮುಟ್ಟಿದವು. ಶಿವಪ್ಪನಾಯಕರ ಎದುರಿಗೆ ಹೇಳಿ ಅವರ ಮನಸ್ಸನ್ನು ನೋಯಿಸುವ ಇಚ್ಛೆ ಅವಳಿಗಿರಲಿಲ್ಲ. ದಿನದಿನಕ್ಕೂ ಗಾದಿಯೊಡೆಯನ ಅನ್ಯಾಯ ಹೆಚ್ಚಿದಾಗ ಅದನ್ನು ಸಹಿಸುವದು ರಂಗನಾಯಕಿಗೆ ಆಗಲಿಲ್ಲ. ಮಾನವಂತ ಹೆಣ್ಣು ಹೊಸ್ತಿಲಿನ ಹೊರಗೆ ಕಾಲಿರಿಸುವದು ದುಸ್ತರವಾಗಿತ್ತು. ರಂಗನಾಯಕಿಯು ಒಮ್ಮೆ ರಾಮನಾಯಕನನ್ನು ಕರೆಸಿ ಈ ವಿಷಯವನ್ನು ಪ್ರಸ್ತಾಪಿಸಿದಳು. ತಾನು ಬಯಸಿದ ರೂಪರಾಣಿ ತನ್ನೆದುರಿಗಿದ್ದುದರಿಂದ ರಾಮನಾಯಕನು ಉನ್ಮತ್ತನಾದರೂ ಅವಳನ್ನು ಬಲಾತ್ಕರಿಸಿ ವಶಪಡಿಸಿಕೊಳ್ಳುವದು ಸಾಧ್ಯವಿರಲಿಲ್ಲ. ಬಹು ನಯನಾಗಿ ಅವಳೊಡನೆ ಮಾತನಾಡಿದನು. ಕೋಟೆಯಲ್ಲಿ ಅಂತಹ ಅನ್ಯಾಯಗಳೇ ಸಾಗಿಲ್ಲವೆಂದು ನಟಿಸಿದನು. ತನ್ನ ಗಮನಕ್ಕೆ ಅವು ಬಂದರೆ ರಂಗನಾಯಕಿಯ ಸಲಹೆಯಂತೆ ಪ್ರತಿಬಂಧಿಸುವೆನೆಂದು ವಚನ ಕೊಟ್ಟನು. ರಾಜ್ಯಭಾರದ ವಿಷಯಗಳ ಬಗ್ಗೆ ಮೇಲಿಂದಮೇಲೆ ವಿಚಾರ ನಡೆಸಲು ತಾನು ರಂಗನಾಯಕಿಯ ಬಳಿ ಬರಲು ಸಿದ್ಧನಿರುವದಾಗಿ ಹೇಳಿದನು.

ರಂಗನಾಯಕಿಗೆ ಅವನ ಮೇಲೆ ವಿಶ್ವಾಸವಾಯಿತು. ರಾಮನಾಯಕನು ಅದೇಕೆ ವಿನೀತನಾದನೆಂಬುದು ಸಾಧುಸ್ವಭಾವದ ರಂಗನಾಯಕಿಗೆ ಹೇಗೆ ತಿಳಿಯಬೇಕು ? ಶಿವಪ್ಪನಾಯಕ ತನ್ನ ಪತಿ, ಕೋಟೆ ತನ್ನ ರಾಜ್ಯವೆಂದು ಭಾವಿಸಿದ ಅವಳು ಕೋಟೆಯ ಮಾನಕ್ಕಾಗಿ ತನ್ನನ್ನೇ ಬಲಿ ಕೊಡಲು ಸಿದ್ಧಳಾಗಿ ನಿಂತಿದ್ದಳು. ಕಾಮಾಂಧನಾದ ರಾಮನಾಯಕನು ಇಲ್ಲದ ನೆವಗಳನ್ನು ತೆಗೆದು ರಂಗನಾಯಕಿಯ ಸೌಧಕ್ಕೆ ಹೋಗಿಬರತೊಡಗಿದನು. ಅವಳಿಗೆ ತನ್ನ ಬಗ್ಗೆ ಸದ್ಭಾವನೆ ಬರುವಂತೆ ನಟಿಸಿದನು. ನಿತ್ಯವೂ ಬಾರದಿದ್ದರೂ ಶಿವಪ್ಪನಾಯಕರು ಎರಡು ದಿನಕ್ಕೊಮ್ಮೆ ತಮ್ಮ ಪ್ರಿಯತಮೆ ರಂಗನಾಯಕಿಯ ಮನೆಗೆ ಬರುತ್ತಿದ್ದರು. ಅಲ್ಲಿಯೂ ಅವರಿಗೆ ರಾಜ್ಯದ ಚಿಂತೆಯೇ ! ನಾಗೇಂದ್ರನು ತಮ್ಮ ಹಿಂದಿನ ಪಾಪ ಕರ್ಮಕ್ಕಾಗಿ ಈ ರೀತಿ ಪ್ರಾಯಶ್ಚಿತ್ತವನ್ನು ಕೊಟ್ಟಿರಬೇಕೆಂದು ಅವಳೆದುರು ಹೇಳುತ್ತಿದ್ದರು. ರಂಗನಾಯಕಿಯು ಶಿವಪ್ಪನಾಯಕರಿಗೆ ಕಣ್ಣುಗಳು ಬರಲೆಂದು ನಾಗೇಂದ್ರನನ್ನು ಪ್ರತಿನಿತ್ಯವೂ ಪ್ರಾರ್ಥಿ

ಸುತ್ತಿದ್ದಳು. ಕನಸಿನಲ್ಲಿ ಒಂದು ದಿವಸ ನಾಗೇಂದ್ರನು ಬಂದು " ಕಣ್ಣುಗಳಿಗೆ ಕಣ್ಣುಗಳನ್ನಿತ್ತರೆ ಬಂದೇ ಬರುವವು" ಎಂದು ನುಡಿದನು. ಅದರರ್ಥ ಅವಳಿಗಾಗಲಿಲ್ಲ.

ಅದೊಂದು ರಾತ್ರಿ ರಂಗನಾಯಕಿಯು ನಾಗೇಂದ್ರನೆದುರು ಭಕ್ತಿಪೂರ್ವಕವಾಗಿ ಕೈಮುಗಿದು ಕುಳಿತುಬಿಟ್ಟಳು. ಶಿವಪ್ಪನಾಯಕರಿಗೆ ಕಣ್ಣುಗಳನ್ನು ದಯಪಾಲಿಸುವ ವರೆಗೂ ತಾನಲ್ಲಿಂದ ಹೋಗೆನೆಂದು ಪ್ರತಿಜ್ಞೆ ಮಾಡಿದ್ದಳು. ರಾತ್ರಿಯ ನೀರವ ನಿಶ್ಶಬ್ದತೆಯಲ್ಲಿ, ಹಣತೆಯ ಪ್ರಶಾಂತ ಬೆಳಕಿನಲ್ಲಿ, ಕುಲದೇವರ ಗರ್ಭಗೃಹದಲ್ಲಿ ರಂಗನಾಯಕಿ ವಿಶ್ವವನ್ನೇ ಮರೆತು, ತದೇಕಧ್ಯಾನದಿಂದ ಪ್ರಾರ್ಥಿಸುತ್ತಿದ್ದಳು. ಸಮಯವನ್ನೇ ಸಾಧಿಸುತ್ತಿದ್ದ ರಾಮನಾಯಕನು ಆ ದೇವಾಲಯಕ್ಕೆ ಹೋದನು. ಚಕ್ಷುಗಳನ್ನು ಮುಚ್ಚಿದ ನಾಯಕಿಯನ್ನು ಕ್ಷಣಕಾಲ ನಾಯಕನು ನೋಡಿದನು. ಆ ಸಜೀವ ರೂಪಲಕ್ಷ್ಮಿಯ ಸೌಂದರ್ಯದ ಮುಂದೆ ಆರ್ತನಾದ ಭಕ್ತನಂತೆ ಅರ್ಧ ಗಳಿಗೆಯ ವರೆಗೂ ನಾಯಕನು ನಿಂತನು. ಅವಳು ಕಣ್ಣು ತೆರೆಯುವ ವರೆಗೆ ಕಾಯುವಷ್ಟು ತಾಳ್ಮೆ ರಾಮನಾಯಕನಲ್ಲಿ ಉಳಿಯಲಿಲ್ಲ. ಅವಳ ಹೆಸರನ್ನು ಕೂಗಿದವನೇ ಅವಳನ್ನಪ್ಪಿಕೊಳ್ಳಲು ಹೋದನು.

ಸರ್ಪವನ್ನು ತುಳಿದು ಅಂಜಿದವರಂತೆ ರಂಗನಾಯಕಿಯು ಒಮ್ಮೆಲೆ ಚೀರಿದಳು. ಎದುರು ನಿಂತ ವ್ಯಕ್ತಿಯನ್ನು ನೋಡಿ ಹುಚ್ಚಾದಳು. ರಾಮನಾಯಕನು ಅವಳ ಕೈಗಳನ್ನು ಜಗ್ಗಿ ತನ್ನೆಡೆಗೆ ಸೆಳೆದುಕೊಳ್ಳಲು ಹೋದನು. ಅವಳಿಗೆ ಪರಿಸ್ಥಿತಿಯು ಅರಿವಾಯಿತು. ಆ ರಾತ್ರಿಯಲ್ಲಿ ಅದಾರು ಅವಳ ಸಹಾಯಕ್ಕೆ ಬರಬೇಕು ? ತಾನು ಶಿವಪ್ಪನಾಯಕರ ಪತ್ನಿ, ನಿಮಗೆ ತಾಯಿಯ ಸಮಾನವೆಂದು ಹೇಳಿದಳು.

ಕಾಮಾಂಧನಾದ ರಾಮನಾಯಕನಿಗೆ ರಂಗನಾಯಕಿಯ ಸೌಂದರ್ಯ ಒಂದನ್ನು ಬಿಟ್ಟು ಬೇರೇನೂ ಕಾಣಿಸುತ್ತಿರಲಿಲ್ಲ. ಅವಳ ಉಪದೇಶವನ್ನು ಗಾಳಿಯಲ್ಲಿ ತೂರಿದ. "ಬೆಲೆವೆಣ್ಣಿಗೆ ಅಣ್ಣನೇನು, ತಮ್ಮನೇನು ? ಪಂಚಮ ಕುಲದ ಹೆಣ್ಣಾದ ನಿನಗೆಲ್ಲಿಯ ಮಾನಮರ್ಯಾದೆ ? ಇಂದು ನಿನ್ನನ್ನು ಭೋಗಿಸಲು ಬಂದಿದ್ದೇನೆ. ವಿಶ್ವವನ್ನೇ ಗೆದ್ದು ವಿಜೇತನಾಗಿದ್ದೇನೆ. ಯಾರಂಜಿಕೆ

ಯಿಲ್ಲ. ಈ ರಾತ್ರಿಯಲ್ಲಿ ನಿನ್ನನ್ಯಾರು ರಕ್ಷಿಸುವರು?" ಎಂದು ಹೇಳಿದವನೇ ಆವಳನ್ನು ಎಳೆಯಲು ಮುಂದೆ ಸಾಗಿದನು. ಚಿಕ್ಕದಾದ ಆ ಗರ್ಭಗೃಹದಲ್ಲಿ ಅವಳನ್ನು ಎಳೆಯುವಾಗ ರಾಮನಾಯಕನ ಕಾಲು ನಾಗೇಂದ್ರನ ಮೂರ್ತಿಯ ಹಿಂದಿದ್ದ ಹುತ್ತದ ಮೇಲೆ ಹೋಯಿತು. ಅವಳನ್ನೆಳೆದು ತನ್ನಧರಗಳಿಗೆ ಅವಳ ಅಧರಗಳನ್ನು ಕೂಡಿಸುವಷ್ಟರಲ್ಲಿಯೇ ಹುತ್ತದಲ್ಲಿದ್ದ ಸರ್ಪವು ರಾಮನಾಯಕ ನನ್ನು ಕಚ್ಚಿತು. 'ಓ' ಎಂದು ಒದರುತ್ತ ನೆಲಕ್ಕೆ ಬಿದ್ದನು.

ರಂಗನಾಯಕಿಗೆ ಅದರ ಕಲ್ಪನೆಯಾಯಿತು. ರಾಮನಾಯಕನಿಗೆ ತಕ್ಕ ಪ್ರಾಯಶ್ಚಿತ್ತವಾಯಿತೆಂದು ಅಂದುಕೊಂಡಳು. ಆದರೆ ಅಂತಹ ರಾತ್ರಿಯಲ್ಲಿ ರಾಮನಾಯಕನು ಮತ್ತು ರಂಗನಾಯಕಿಯರಿರ್ವರೇ ಗರ್ಭಗೃಹದಲ್ಲಿ ಕಲೆತಿ ರುವರೆಂದು ಮತ್ತು ಅವನ ಮರಣಕ್ಕೆ ತಾನೇ ಕಾರಣಳೆಂದು ಲೋಕವಾಡಿ ಕೊಳ್ಳುವದೆಂದು ಅಂಜಿದಳು. ಆ ಅಪವಾದವನ್ನು ಹೊರಲು ಅವಳು ಸಿದ್ಧ ಳಾಗಲಿಲ್ಲ. ನಾಗೇಂದ್ರನನ್ನು ಪ್ರಾರ್ಥಿಸಿದಳು. ರಾಮನಾಯಕನನ್ನು ಬದು ಕಿಸದಿದ್ದರೆ ತಾನಲ್ಲಿ ಅವನ ಪಾದಗಳಿಗೆ ತಲೆ ಒಡೆದುಕೊಂಡು ಸಾಯುವೆ ನೆಂದು ಹೇಳಿದಳು. ಭಕ್ತಳ ಕರೆಗೆ ನಾಗೇಂದ್ರನು "ಓ" ಗೊಟ್ಟನು. ಕಡಿದ ಸರ್ಪವು ಮತ್ತೆ ಬಂದು ರಾಮನಾಯಕನ ದೇಹದಲ್ಲಿ ಬಿಟ್ಟ ವಿಷವನ್ನು ಹೀರಿ ಕೊಂಡು ಹೋಯಿತು. ರಾಮನಾಯಕನು ಸಾವಕಾಶವಾಗಿ ಕಣ್ಣುಗಳನ್ನು ತೆರೆದನು. ಮೈಮೇಲೆ ಪ್ರಜ್ಞೆ ಬಂದ ಕೂಡಲೆ ಎದುರಿಗಿದ್ದ ರಂಗನಾಯಕಿಯ ಪಾದಗಳ ಮೇಲೆ ಬಿದ್ದು ಅವಳು ಕ್ಷಮಿಸುವ ವರೆಗೂ ತಾನಲ್ಲಿಂದ ಏಳುವದಿಲ್ಲ ವೆಂದು ಹೇಳಿದನು. ರಂಗನಾಯಕಿಯು ರಾಮನಾಯಕನು ಪರಿವರ್ತನೆ ಹೊಂದಿದನೆಂದು ಭಾವಿಸಿ ಅವನನ್ನು ಎಬ್ಬಿಸಿದಳು. ತಾಯಿ ಮಗುವನ್ನು ಸಂತೈ ಸುವಂತೆ ಸಂತೈಸಿದಳು.

ತಾನು ಆದುವರೆಗೆ ಮಾಡಿದ ಎಲ್ಲ ಅನ್ಯಾಯಗಳನ್ನು ರಾಮನಾಯ ಕನು ಪಶ್ಚಾತ್ತಾಪದಿಂದ ಒಪ್ಪಿದನು. ಮಹಾ ಅನ್ಯಾಯವೆಂದರೆ ತನ್ನಣ್ಣನ ಕಣ್ಣಲ್ಲಿ ವಿಷವನ್ನು ಹಾಕಿಸಿ ಅವನು ಅಂಗಹೀನನಾಗುವಂತೆ ತಾನೇ ಮಾಡಿದೆ ನೆಂದು ಹೇಳಿದನು. ಅಲ್ಲದೇ ರಾಜ್ಯಭಾಂಡಾರದಲ್ಲಿ ಕಾಸಿಲ್ಲದ್ದಕ್ಕೆ ಕೋಟೆಯ ರಾಜ್ಯವನ್ನೇ ಹದಿನೈದು ಸಹಸ್ರ ಕನಕಗಳಿಗೆ ತಿಮ್ಮರಸನಿಗೆ ಒತ್ತೆ ಹಾಕಿರುವ

ದಾಗಿ ನುಡಿದನು. ತನ್ನೆಲ್ಲ ತಪ್ಪುಗಳನ್ನು ರಂಗನಾಯಕಿಯು ಕ್ಷಮಿಸಬೇಕಾಗಿ ಬೇಡಿದನು.

ಮೊದಲು ಒತ್ತೆಹಾಕಿದ ರಾಜ್ಯವನ್ನು ಬಿಡಿಸಬೇಕೆಂದು ರಂಗನಾಯಕಿ ವಿಚಾರಿಸಿದಳು. ಆದರೆ ರಾಜ್ಯಭಾಂಡಾರದಲ್ಲಿ ಕಾಸಿರಲಿಲ್ಲ. ಪ್ರಜೆಗಳಿಗೆ ಆದಾಗಲೆ ಕರಭಾರ ಹೆಚ್ಚಿದೆ. ಸರಿ. ತಾನು ಹಣ ತೆತ್ತುವದಾಗಿ ಹೇಳಿದಳು. ಒಂದು ದಿವಸ ರಾಮನಾಯಕನನ್ನು ಕರೆದುಕೊಂಡು ರಂಗನಾಯಕಿ ತಾನೇ ತಿಮ್ಮರಸನ ಬಳಿ ಹೋಗಬೇಕೆಂದು ನಿಶ್ಚಯ ಮಾಡಿ ರಾಮನಾಯಕನಿಗೆ ತಿಳಿಸಿದಳು. ಆದಾಗಲೇ ಅರುಣನು ತನ್ನೊಡೆಯ ರವಿರಾಜನಿಗೆ ರಥವನ್ನು ಸಿದ್ಧಪಡಿಸಹತ್ತಿದ್ದನು. ರಾಮನಾಯಕನು ರಂಗನಾಯಕಿಯನ್ನು ಅವಳ ಮನೆಗೆ ಕಳಿಸಿ ತಾನು ಬೆಳಗುಹರಿಯುವದರಲ್ಲಿಯೇ ಅರಮನೆ ಸೇರಿದನು.

ಈ ಘಟನೆ ಸಂಭವಿಸಿದ ಮರುದಿನವೇ ರಾಮನಾಯಕನೊಡನೆ ಕನಕಗಳನ್ನು ಕಟ್ಟಿಕೊಂಡು ರಂಗನಾಯಕಿ ಹೊರಟಳು. ತನಗೆ ಶಿವಪ್ಪನಾಯಕರಿತ್ತ ಎಲ್ಲ ಸಂಪತ್ತನ್ನೂ ಬಳೆದುಕೊಂಡಳು. ರಾಮನಾಯಕನೊಡನೆ ಹಣ ಕೊಟ್ಟು ಕೋಟೆಯನ್ನು ಬಿಡಿಸಿಕೊಂಡು ಬಾ ಅಂದಿದ್ದರೆ ನಡೆಯುತ್ತಿತ್ತು. ಆದರೆ ಆದರಲ್ಲಿ ವಿಶ್ವಾಸವಿರದ್ದಕ್ಕೆ ಸ್ವತಃ ತಾನೂ ಹೊರಟಳು. ಅವರು ತಿಮ್ಮರಸನ ಬಳಿ ಹೋದ ರಾತ್ರಿಯೇ ಶಿವಪ್ಪನಾಯಕರು ರಂಗನಾಯಿಕೆಯ ಸೌಧಕ್ಕೆ ಬಂದರು. ದಾದಿಯರು ಅವರಿಗೆ ರಂಗನಾಯಕಿಯು ರಾಮನಾಯಕನೊಡನೆ ಯಾವದೋ ಊರಿಗೆ ಹೋದಳೆಂದು ತಿಳಿಸಿದರು. ಈ ವಿಷಯವನ್ನು ಬೇಕೆಂತಲೇ ರಂಗನಾಯಕಿ ಗೌಪ್ಯವಾಗಿಟ್ಟಿದ್ದಳು. ಶಿವಪ್ಪನಾಯಕರಿಗೆ ಬಲವಾದ ಸಂಶಯ ಬಂದಿತು. ತಮ್ಮ ಕಣ್ಣುಗಳು ಹೋದದ್ದಕ್ಕೆ ಅವಳು ತನ್ನ ಮೇಲಿನ ಮನಸ್ಸನ್ನು ತೆಗೆದಿರಬೇಕೆಂದು ಭಾವಿಸಿದರು. ಅತ್ತ ರಂಗನಾಯಕಿಯು ತಿಮ್ಮರಸನಿಗೆ ಹಣ ತೆತ್ತು ಒತ್ತೆಯ ಕತಬಿಯನ್ನು ತಿರುಗಿ ತಂದಳು. ಅವನ ಕನಕವನ್ನು ಕೊಡದೇ ಹೋಗಿದ್ದರೆ ಕೋಟೆಯ ರಾಜ್ಯವು ತಿಮ್ಮರಸನಿಗೆ ಹೋಗುತ್ತಿತ್ತು.

ಮರಳಿ ಕೋಟೆಗೆ ಬಂದಮೇಲೆ ರಾಮನಾಯಕನಿಗೆ ಎಲ್ಲಿಯೂ ಮುಖ ತೋರಿಸುವಂತಾಗಲಿಲ್ಲ. ನನ್ನಂತಹ ಪಾಪಿಷ್ಠನೇ ಎಲ್ಲಿಯೂ ಇಲ್ಲವೆಂದು

ಮಿಡುಕಹತ್ತಿದನು. ಹೆಚ್ಚಾಗಿ ದೇವರಂತಹ ಮನುಷ್ಯನಾದ ತನ್ನಣ್ಣನ ಕಣ್ಣುಗಳನ್ನು ಕಳೆದನಲ್ಲಾ ಎಂದು ಬಹುವಾಗಿ ದುಃಖಿಸಿದನು. ಕಣ್ಣುಗಳು ಬೇಕಿದ್ದರೆ ನಾಗೇಂದ್ರನಿಗೆ ಕಣ್ಣುಗಳೇ ಬೇಕಂತೆ ಎಂಬ ರಂಗನಾಯಕಿಯ ಕನಸನ್ನು ಕೇಳಿದ್ದನು. ತಾನೇಕೆ ನಾಗೇಂದ್ರನಿಗೆ ತನ್ನ ಕಣ್ಣುಗಳನ್ನರ್ಪಿಸ ಬಾರದೆಂದು ವಿಚಾರಿಸಿದನು. ವಿಚಾರವು ನಿರ್ಧಾರಕ್ಕಿಳಿಯಿತು. ಆದೊಂದು ರಾತ್ರಿ ರಾಮನಾಯಕನು ನಾಗೇಂದ್ರನ ದೇವಾಲಯಕ್ಕೆ ಹೋಗಿ ತನ್ನ ಪಾಪದ ಪ್ರಾಯಶ್ಚಿತ್ತವೆಂದು ಅಂದುಕೊಂಡು ತನ್ನಣ್ಣನ ಕಣ್ಣುಗಳಲ್ಲಿ ಹಾಕಿಸಿದ ವಿಷ ವನ್ನೇ ತಾನು ತನ್ನ ಕಣ್ಣುಗಳಲ್ಲಿ ಹಾಕಿಕೊಂಡು "ಇದೋ ನಾಗೇಂದ್ರ, ನನ್ನ ಣ್ಣನ ಕಣ್ಣುಗಳಿಗೆ ಪ್ರತಿಯಾಗಿ ಕಣ್ಣುಗಳನ್ನು ಕೊಟ್ಟಿದ್ದೇನೆ ನನ್ನಣ್ಣನಿಗೆ ಇನ್ನಾದರೂ ಕಣ್ಣನ್ನು ದಯಪಾಲಿಸು" ಎಂದು ಪ್ರಾರ್ಥಿಸಿ ತನ್ನ ತಲೆಯನ್ನು ಅವನ ಪಾದಗಳಿಗೆ ಜಜ್ಜಿಕೊಂಡು ಪ್ರಾಣಬಿಟ್ಟನು.

ದೇವಾಲಯದ ಗರ್ಭಗೃಹದಲ್ಲಿ ರಕ್ತವು ನಿಂತಿತ್ತು. ದೇವರ ಪಾದ ಗಳು ರಕ್ತದಲ್ಲಿ ಮುಳುಗಿ ಹೋಗಿದ್ದವು. ಪರಿಪಾಠದಂತೆ ರಂಗನಾಯಕಿಯು ತಾನೋರ್ವಳೇ ನಾಗೇಂದ್ರನ ದೇವಾಲಯಕ್ಕೆ ಬಂದಳು. ಆ ದೃಶ್ಯವನ್ನು ನೋಡಿ ಚೀರಿದಳು. ತನ್ನ ತಪ್ಪಿಗೆ ರಾಮನಾಯಕನು ಈ ರೀತಿ ಪ್ರಾಯಶ್ಚಿತ್ತ ವನ್ನು ತೆಗೆದುಕೊಂಡಿರುವನೆಂದು ತಿಳಿದಳು. ವಾರ್ತೆಯು ಹರಡದಂತೆ ಮನೆಗೆ ಬಂದು ದಾಸಿಯರಿಂದ ಶಿವಪ್ಪನಾಯಕರನ್ನು ದೇವಾಲಯಕ್ಕೆ ಕರೆಸಿದಳು, ಆದಾಗಲೇ ಅರ್ಧ ರಾತ್ರಿ ಸರಿದಿತ್ತು. ಶಿವಪ್ಪನಾಯಕರು ಬಂದು ಹೇಳಿದರು: "ರಂಗನಾಯಕಿ, ನನಗೆ ದೃಷ್ಟಿಮಾಂದ್ಯವಾಗಿದೆಯೆಂದು ನನ್ನನ್ನು ತ್ಯಜಿಸಿ ದಿಯಾ? ನಿನ್ನಲ್ಲಿ ನನಗೆ ನಂಬಿಗೆಯಿತ್ತು. ನಿನ್ನ ಚಾರಿತ್ರ್ಯವೂ ಈರೀತಿ ಯಾಯಿತೇ? ಮೊದಲೇ ವೇಶ್ಯೆ, ಮೇಲೆ ಪಂಚಮರವಳು. ನನ್ನ ದುರ್ಭಾಗ್ಯ. ನನ್ನ ತಮ್ಮನಲ್ಲಿ ನಿನಗೆ ವಾಸನೆಯೇ........"

ಮಾತು ಮುಂದುವರಿಯುವದರಲ್ಲಿತ್ತು. ರಂಗನಾಯಕಿಯು ಶಿವಪ್ಪನಾಯ ಕರ ಬಾಯಿ ಮುಚ್ಚಿದಳು. "ನೀವೂ ಈ ರೀತಿ ಪಾಪದ ಮಾತನಾಡುವಿರಾ? ನಾಗೇಂದ್ರನ ಸಾಕ್ಷಿಯಾಗಿ ನಾನು ಶುದ್ಧಳು" ಎಂದು ಹೇಳಿದಳು. ಅವಳ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿಯುತ್ತಿತ್ತು. ಹೊಲೆಗೆಲಸ

ಮಾಡಿಯೂ ನಾಗೇಂದ್ರನ ಸಾಕ್ಷಿಯೇ? ಎಂದು ಕೈಹಿಡಿದ ಅವಳ ಕೈ-ಯನ್ನು ಹಿಡಿದು ಸರಿಸಿ ಅವಳ ಕುತ್ತಿಗೆಯನ್ನು ಹಿಚುಕಲು ಶಿವಪ್ಪನಾಯಕರು ಪ್ರಯತ್ನಿಸಿದರು. ನಿಮ್ಮಿಂದ ಸಾವು ಬಂದರೆ ನನಗೆ ಮುಕ್ತಿ ಬಂದಂತೆ ಎಂದು ರಂಗನಾಯಕಿಯು ಹೇಳಿದಳು.

ಶಿವಪ್ಪನಾಯಕರು ಅವಳ ಕುತ್ತಿಗೆಗೆ ಕೈಯನ್ನು ಹಾಕುತ್ತಿರುವಾಗಲೇ ನಾಗೇಂದ್ರನ ಹಿಂದಿನ ಹುತ್ತಿನಲ್ಲಿಯ ಸರ್ಪವು ಬಂದು ಶಿವಪ್ಪನಾಯಕರ ಹಿಂಬಡಕ್ಕೆ ಕಡಿಯಿತು. ಅದರ ಕಡಿತದಿಂದ, ರಂಗನಾಯಕಿಯನ್ನು ಹಿಡಿದ ಕೈಗಳು ತಾವೇ ಬಿಟ್ಟವು. ನೋವಿನಿಂದ ಒರಲುತ್ತ ನೆಲಕ್ಕೆ ಬಿದ್ದರು. ರಂಗನಾಯಕಿ ಅವರ ಬೀಳುವ ದೇಹವನ್ನು ಎತ್ತಿ ತನ್ನ ತೊಡೆಯ ಮೇಲೆ ಹಾಕಿಕೊಂಡು ಅವರನ್ನು ಬದುಕಿಸಬೇಕೆಂದು ನಾಗೇಂದ್ರನಿಗೆ ಪ್ರಾರ್ಥಿಸಿ ದಳು. ಆದರೆ ದೇವರ ಸರ್ಪವು ತಾನೊಲ್ಲೆನೆಂಬಂತೆ ಹುತ್ತದಿಂದ ಒಮ್ಮೆ ತನ್ನ ಹೆಡೆಯನ್ನು ಹೊರಕ್ಕೆ ತೆಗೆದು ಅಲ್ಲಾಡಿಸಿ ಮತ್ತೆ ಒಳಗೆ ಹೋಯಿತು.

ರಂಗನಾಯಕಿಯು ತಾನೇ ಅವರ ಹಿಂಬಡಕ್ಕೆ ತನ್ನ ಬಾಯಿಯನ್ನು ಹಚ್ಚಿ ವಿಷ ಹೀರಿದಳು. ಸ್ಮೃತಿ ತಪ್ಪಿದ ಶಿವಪ್ಪನಾಯಕರಿಗೆ ಎಚ್ಚರ ವಾಯಿತು. ಇನ್ನೊಂದು ಆಶ್ಚರ್ಯದ ಸಂಗತಿಯೆಂದರೆ, ಅವರಿಗೆ ಎಚ್ಚರಾದಾಗ ಅವರ ಕಣ್ಣುಗಳು ಬಂದಿದ್ದವು. ವಿಷ ಹೀರಿದ ರಂಗನಾಯಕಿಯು ಶಿವಪ್ಪ ನಾಯಕರಿಗೆ ದೃಷ್ಟಿ ಬಂದುದನ್ನು ನೋಡಿ ನಗುತ್ತ ನಿಂತಿದ್ದಳು. ಅವಳಿಗೆ ಅದರಿಂದ ಏನೂ ಆಗಿರಲಿಲ್ಲ.

ಶಿವಪ್ಪನಾಯಕರು ರಂಗನಾಯಕಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ದರು. ತನ್ನದು ತಪ್ಪೆಂದು ಹೇಳಿದರು. ರಂಗನಾಯಕಿಯು ಅವರನ್ನು ಎಬ್ಬಿಸಿ, ಮನ್ನಿಸಲು ನಾಗೇಂದ್ರನೊಬ್ಬನೇ ಯೋಗ್ಯನೆಂದು ಹೇಳಿದಳು. ಆಮೇಲೆ ರಾಮನಾಯಕನ ಅತ್ಯಾಚಾರ, ಕೋಟೆಯ ರಾಜ್ಯವನ್ನು ತಿಮ್ಮರಸ ನಿಗೆ ಒತ್ತೆ ಹಾಕಿದ್ದು, ಶಿವಪ್ಪನಾಯಕರ ಕಣ್ಣುಗಳು ಹೋಗಿ ಬಂದ ಕತೆ, ಕೋಟೆಯ ರಾಜ್ಯಕ್ಕೆ ತಿಳಿದವು. ಯಾರಿಗೆ ಸರ್ಪವು ಕಡಿಯುವದೊ ಅವರು ಈ ನಾಗೇಂದ್ರನ ದೇವಾಲಯಕ್ಕೆ ಬಂದರೆ ಕಡಿಮೆಯಾಗಲೆಂದು ರಂಗನಾಯಕಿ ವರವನ್ನು ಪಡೆದಳಂತೆ!

ಶಿವಪ್ಪನಾಯಕರು ತಾವೇ ರಂಗನಾಯಕಿಯನ್ನು ನಂತರ ಪಟ್ಟಕ್ಕೆ ಕುಳ್ಳಿರಿಸಿದರು. ಅವಳು ಯೋಗ್ಯ ರೀತಿಯಿಂದ ರಾಜ್ಯವಾಳಿದಳು. ಅವಳ ಪುಣ್ಯದಿಂದಲೇ ಕೋಟೆಯಲ್ಲಿ ಪಂಚಮ–ಪಂಚಮೇತರ ಎಂಬ ಭೇದಭಾವ ಅಳಿದಿದ್ದು. ಮತ್ತು ಸರ್ಪವು ಕಚ್ಚಿದರೆ ವಿಷವನ್ನು ನಾಗೇಂದ್ರನು ಕಡಿಮೆ ಮಾಡುವದು ಪ್ರಾರಂಭವಾಯಿತು. ಅಂದಿನಿಂದ ಕೋಟೆ ಹೊಲತಿಕೋಟೆ ಎಂಬ ಹೆಸರನ್ನು ಪಡೆಯಿತು."

ಕತೆ ಮುಗಿದಾಗ ಪದ್ಮಳ ಕಣ್ಣಲ್ಲಿ ನೀರು ತುಂಬಿತ್ತು. ಹೊಲತಿಕೋಟೆಯನ್ನು ಬಿಡುವಾಗ ಅವಳ ಹೃದಯ ಭಾರವಾಗಿರಬೇಕು. "ಹೌದಣ್ಣಾ, ಕಲ್ಲಿಗೂ ಕತೆಯಿದೆ ಎಂದು ಹೇಳುವ ಮಾತು ಸತ್ಯ" ಎಂದು ಹೇಳಿದಳು.

# ಸಾವಿರಗತ್ತಿ ತೋಟ

ನಿಸರ್ಗ ದೇವತೆಯ ನಚ್ಚಿನ ಅಮರಲೋಕವಾದ ಮಲೆನಾಡಿನ ಸೆರಗಿನಲ್ಲಿ ನಿಂತಿರುವ ಸವಣೂರಿನ ದೊಡ್ಡ ಕೆರೆಯ ದಡದ ಸುತ್ತಲೂ ಚಕ್ರಾಕಾರವಾಗಿ ನಿಂತ ತೋಟಗಳು ಅರಸಿಕ ಪಥಿಕನನ್ನು ಕೂಡ ಸೆಳೆದು ಸೌಂದರ್ಯವನ್ನು ಸವಿಯಲು ಹಚ್ಚುತ್ತವೆ. ಅಲ್ಲಿರುವ ತೋಟಗಳಲ್ಲೆಲ್ಲಾ ಅತಿ ಪ್ರಾಚೀನವಾದದ್ದು ಮತ್ತು ವಿಶಾಲವಾದದ್ದು ನಮ್ಮ ಸಾವಿರಗತ್ತಿ ತೋಟ. ಈ ತೋಟದಲ್ಲಿ ಹಲಸು, ತೆಂಗು, ಮಾವು, ಅಡಕೆ, ಕಬ್ಬು, ಬಾಳೆ, ನೀರಲ ವರುಷವರುಷಕ್ಕೂ ತಲೆಭಾರವಾದ ಫಲಗಳನ್ನು ಹೊತ್ತುಕೊಂಡು ನಿಂತಿರುತ್ತವೆ. ವಸಂತದಲ್ಲಿ ಅರಳಿ ನಿಲ್ಲುವ ಮಲ್ಲಿಗೆ ಜಾಜಿಗಳು ತಮ್ಮ ಸೌರಭವನ್ನು ಹಿಪ್ಪೆಮರದ ತಿಳಿಗಾಳಿಯಲ್ಲಿ ಬೆರೆಸಿ ತೋಟಕ್ಕೆ ಬರುವ ಆಗಂತುಕರನ್ನು ಸ್ವಾಗತಿಸುತ್ತವೆ. ಇಪ್ಪತ್ತು ಜೀತದಾಳು ದುಡಿಯುವ ಈ ದೊಡ್ಡ ತೋಟದ ಸೌಂದರ್ಯವನ್ನು ಹೀರಿದಷ್ಟೂ ಮನಸ್ಸಿಗೆ ತೃಪ್ತಿಯಾಗುತ್ತಿದೆ. ಫಲಗಳ ಭಾರದಿಂದ ಬಾಗಿರುವ ವೃಕ್ಷಗಳು ಪುಷ್ಪಗಳ ಅರಳುವಿಕೆಯಿಂದ ಬಳಕುತ್ತಿರುವ ಲತೆಗಳು, ನೆಲದಿಂದ ಆಗಸದವರೆಗೂ ಚಿತ್ರ ತೆಗೆದಂತಿರುವ ಎಲೆಬಳ್ಳಿಗಳು ಬರುವವರಿಗೆ ನಮಸ್ಕರಿಸಿ ಬಾ ಎಂದು ಕರೆಯುತ್ತಿವೆಯೇನೋ ಎಂದು ಭಾಸವಾಗುತ್ತಿದೆ.

ಸಾವಿರಗತ್ತಿ ತೋಟದಲ್ಲಿ ಬರುವ ಫಲಗಳನ್ನು ಜನಕ್ಕೆ ಕೊಡದೆ ನಾವೊಬ್ಬರೆ ಸವಿದರೆ ಬರುವ ವರುಷ ವೃಕ್ಷಗಳೆಲ್ಲಾ ಬಂಜೆಯಾಗುತ್ತವೆ, ನೆಲವೆಲ್ಲಾ ಒಣಗುತ್ತವೆ, ಕೆರೆಯೆಲ್ಲಾ ಬರಿದಾಗುತ್ತದೆ, ಎಲೆಬಳ್ಳಿಗಳೆಲ್ಲಾ ಬಾಡುತ್ತವೆ. ಜನಕ್ಕೆ ನಾವು ಕರೆದುಕೊಟ್ಟಷ್ಟೂ ಹೆಚ್ಚುಹೆಚ್ಚಾಗಿ ಮರುವರುಷ ಫಲಗಳು ಬರುತ್ತಿವೆ. ಸುಗ್ಗಿಯಲ್ಲಿ ಕಬ್ಬನ್ನಾಡುವಾಗ ಬೀದಿಯಲ್ಲಿ ಹೋಗುವವರನ್ನು ಕರೆದು ರಸ, ಕಾಕಂಬಿ, ಬೆಲ್ಲಗಳನ್ನು ಕೊಡುತ್ತೇವೆ. ಹಲಸು, ತೆಂಗು ಅಡಿಕೆ

ನೀರಲಗಳನ್ನಂತೂ ಮನೆಮನೆಗೂ ಹೋಗಿ ಮುಟ್ಟಿಸಿ ಬರುತ್ತೇವೆ. ಈ ರೀತಿ ಯಾರಿಗೂ ಅದರ ಬೆಳೆಯನ್ನು ಕೊಡದೆ ನಮ್ಮ ಮನೆಗೆ ಎಲ್ಲವನ್ನೂ ತೆಗೆದು ಕೊಂಡುದಕ್ಕೆ ನಮ್ಮಲ್ಲೊಬ್ಬನು ಬಹುರೀತಿ ಕಷ್ಟವನ್ನು ಅನುಭೋಗಿಸಿದನಂತೆ. ನಮ್ಮ ತಂದೆ ಅದನ್ನು ಕತೆ ಮಾಡಿ ಹೇಳುತ್ತಾರೆ. ಅಂತಲೇ ಅವರು ಬೇಡಿದ ವರಿಗೆ ಅದರ ಹಣ್ಣು, ಪುಷ್ಪ, ಕಬ್ಬು, ಬತ್ತ ಕೊಡುತ್ತಾರೆ. ಜನಕ್ಕಿತ್ತು ಮಿಕ್ಕು ದನ್ನು ಮನೆಗೆ ತೆಗೆದುಕೊಳ್ಳುವದು ವಾಡಿಕೆ. ಎಷ್ಟು ಧಾರಾಳವಾಗಿ ಜನಕ್ಕೆ ಆ ತೋಟದ ಫಲಗಳನ್ನು ಕೊಡುತ್ತೇವೆಯೋ ಅಷ್ಟೇ ಧಾರಾಳವಾಗಿ ಭೂಮಿ ತಾಯಿ ನಮಗೆ ಫಲ ಕೊಡುತ್ತಾಳೆ. ಈ ಸಾವಿರಗತ್ತಿ ತೋಟದ ವೈಶಿಷ್ಟ್ಯವು ಸವಣೂರಿನ ಸುತ್ತಲಿರುವ ನೂರಾರು ಹಳ್ಳಿಗಳಿಗೆ ಗೊತ್ತು. ಅಂತಲೇ ಕೂಗ ಳತೆ, ಕಲ್ಲೊಗೆತಗಳ ಅಂತರದಲ್ಲಿದ್ದ ಹಳ್ಳಿಗರು ಗುಂಪುಗಟ್ಟಿಕೊಂಡು ಬಂದು ಕಬ್ಬಿನ ಹಾಲನ್ನಾಗಲಿ, ಮಾವನ್ನಾಗಲಿ, ತೆಂಗಿನಕಾಯಿಯನ್ನಾಗಲಿ ಸವಿದು ಹೋಗುತ್ತಾರೆ. ಸವಣೂರಿನ ಪ್ರತಿ ವ್ಯಕ್ತಿಯಂತೂ ಸಾವಿರಗತ್ತಿ ತೋಟದ ಒಂದಿಲ್ಲೊಂದು ಫಲವನ್ನು ವರುಷದ ಒಂದಿಲ್ಲೊಂದು ದಿನ ಸವಿಯಲೇ ಬೇಕು.

ಇದಕ್ಕೆ ಸಾವಿರಗತ್ತಿ ತೋಟ ಎಂದೇಕೆ ಕರೆಯುತ್ತಾರೆ? ಎಂದು ನನಗೆ ಬಹು ಯೋಚನೆ ಬಿದ್ದಿತು. ಇದು ಇತಿಹಾಸ ಪ್ರಸಿದ್ಧ ಸಂಕಣ್ಣನಾಯಕರ ತೋಟವಂತೆ. ಅವರ ವಂಶಜರಿಂದ ಸಾಲದಲ್ಲಿ ಇದು ನಮ್ಮ ಮನೆತನಕ್ಕೆ ಬಂದಿರಬೇಕು. ನಾನೊಮ್ಮೆ ನಮ್ಮ ಮನೆಯಲ್ಲಿದ್ದ ನೂರಾರು ವರುಷಗಳ ಹಿಂದಿನ ಕತಬಿಗಳನ್ನು ತಿರುವಿ ಹಾಕುತ್ತಿದ್ದೆ. ಕತಬಿ ಕೈಯಲ್ಲಿ ಹಿಡಿದರೆ ಪುಡಿ ಪುಡಿಯಾಗುವಷ್ಟು ಜರ್ಜರಿತವಾಗಿದ್ದವು. ಒಮ್ಮೆ ಅದನ್ನು ನೋಡುವಾಗ ಈ ಸಾವಿರಗತ್ತಿಯ ಉಲ್ಲೇಖ ಅದರಲ್ಲಿ ಬಂದಿತು. ನನಗೆ ಲಕ್ಷಾವಧಿ ರೂಪಾಯಿ ಸಿಕ್ಕಷ್ಟು ಸಂತೋಷವಾಯಿತು. ಮೊಗಶಾಲೆಯಿಂದ ಆ ಕತಬಿಯನ್ನೆತ್ತಿ ಕೊಂಡು ಒಳಕ್ಕೆ ಧಾವಿಸಿದೆ. ಹಾದಿಯಲ್ಲಿ ಎಡವಿದವರ ಲಕ್ಷ್ಯ ಕೂಡ ನನಗೆ ಇರಲಿಲ್ಲ. ನಾನು ಮುಂದಕ್ಕೆ ಹೋದಾಗ ಪದ್ಮಾ "ಅಲ್ಲಣ್ಣಾ, ಹಾದಿ ಯಲ್ಲಿ ಕೂತವರು ನಿನ್ನ ಕಣ್ಣಿಗೆ ಕಾಣಿಸದಾದರೆ? ನೀನು ಆನೆಯನ್ನು ಎಡ ಪುವವ ಕಾಣುತ್ತದೆ" ಎಂದು ಎಂದಿನಂತೆ ಗಹಗಹಿಸಿ ನಕ್ಕು ಮೂದಲಿಸಿ ನುಡಿದಳು.

"ಇಲ್ಲ ಪದ್ಮಾ, ನಿನ್ನನ್ನೇ ನೋಡಲು ಹೊರಟಿದ್ದೆ, ನೋಡು. ನಮ್ಮ ಸಾವಿರಗತ್ತಿ ತೋಟದ ಕಥೆ ಸಿಕ್ಕಿದೆ. ನಿನ್ನೆದುರಿಗೆ ಓದಬೇಕೆಂದು ಹೊರಟಿದ್ದೆ. ಉತ್ಸಾಹ ಭರದಲ್ಲಿ ನೀನು ಕೂತದ್ದೇ ಕಾಣಿಸಲಿಲ್ಲ." ಎಂದು ಹೇಳಿದೆ. ನನ್ನ ಕಲ್ಲಿನ ಕತೆ, ಕೆರೆಯ ಕತೆ ಕೇಳಿ ಬಹು ಸಂತೋಷಪಡುತ್ತಿದ್ದ ಸಹೋದರಿ ಪದ್ಮಳು "ಏನಣ್ಣಾ, ನಮ್ಮ ಸಾವಿರಗತ್ತಿ ತೋಟದ ಕತೆ ಸಿಕ್ಕಿತೆ ? ಓದಿ ಹೇಳಣ್ಣ" ಎಂದು ಕತೆ ಕೇಳಲು ಕುಳಿತಳು. ಅವಳಿಗೆ ನನ್ನ ಕತೆಗಳನ್ನು ಕೇಳುವದೆಂದರೆ ಬಹು ಉತ್ಸಾಹ. ಹೇಳಲಿಕ್ಕೆ ನನಗೂ ಕೂಡ ಅಷ್ಟೇ ಆನಂದ. ಕತೆ ಪ್ರಾರಂಭವಾಯಿತು.

ಸಂಕಣ್ಣನಾಯಕರು ಸವಣೂರಿನ ಪಾಳೆಯಗಾರರು. ಬಂಕಾಪುರ ರಾಜ್ಯದ ಕೆಳಗೆ ಸವಣೂರ ಒಂದು ಪಾಳಯವಾಗಿದ್ದ ಕಾಲವದು. ಸಂಕಣ್ಣನಾಯಕರ ಆಧೀನದಲ್ಲಿ ಒಂದು ಸಾವಿರ ಖಡ್ಗಧಾರಿ ಸೈನಿಕರಿದ್ದರು. ಪಾಳೆಯಗಾರರು ತಮ್ಮ ಆಧೀನದಲ್ಲಿದ್ದ ನೆಲದ ಸುಂಕವನ್ನು ತೆಗೆದುಕೊಂಡು ಆ ನೆಲದಲ್ಲಿ ಸುವ್ಯವಸ್ಥೆ ಕಾಯ್ದುಕೊಂಡು ಆಶ್ರಯದಾತ ದೊರೆಗೆ ವರ್ಷಕ್ಕಿಷ್ಟು ಕಪ್ಪನ್ನು ಕೊಡಬೇಕಾಗುತ್ತಿತ್ತು. ಅಲ್ಲದೆ ತಮ್ಮ ದೊರೆಗೆ ವಿಪತ್ತು ಬಂದಾಗ ತಮ್ಮ ಕೈಕೆಳಗಿನ ಸೈನಿಕರನ್ನು ತೆಗೆದುಕೊಂಡು ಸಹಾಯಕ್ಕೆ ಅವರು ಧಾವಿಸಬೇಕಾಗುತ್ತಿತ್ತು. ಬಂಕಾಪುರ ರಾಜ್ಯದ ಕೆಳಗಿನ ನಾಲ್ಕಾರು ಪಾಳೆಯಗಾರರಲ್ಲಿ ಸವಣೂರಿನ ಸಂಕಣ್ಣನಾಯಕರೆಂದರೆ ಒಳ್ಳೇ ಪ್ರಭಾವಶಾಲಿಯಾದ ಪಾಳೆಯಗಾರರಾಗಿದ್ದರು. ಚಿಕ್ಕ ಪಾಳೆಯವಾದ ಸವಣೂರು ಮತ್ತು ಅದರ ೨೨ ಹಳ್ಳಿಗಳಲ್ಲಿ ಸಂಕಣ್ಣನಾಯಕರು ಬಹು ವ್ಯವಸ್ಥಿತ ರೀತಿಯಲ್ಲಿ ರಾಜ್ಯವಾಳುತ್ತಿದ್ದರು. ಪ್ರಜೆಗಳನ್ನು ಮಕ್ಕಳಂತೆ ಜೋಪಾನ ಮಾಡುತ್ತಿದ್ದರು. ಅಂತಲೆ ಬಂಕಾಪುರ ರಾಜ್ಯದಲ್ಲಿ ನಾಯಕರಿಗೆ ಒಳ್ಳೇ ಮರ್ಯಾದೆಯಿತ್ತು. ಅವರ ಕೈಕೆಳಗೆ ಜೀವಕ್ಕೆ ಜೀವ ಕೊಟ್ಟು, ರಕ್ತಕ್ಕೆ ರಕ್ತ ಕೊಟ್ಟು ಸ್ವಾಮಿಗಾಗಿ ತಮ್ಮ ಮೋಹಗಳನ್ನೇ ತೊರಾಡಲು ಸಿದ್ಧರಾದ ಸಾವಿರ ಖಡ್ಗಧಾರಿ ಸೈನಿಕರಿದ್ದುದರಿಂದ ಅವರಿಗೆ ಸಾವಿರಗತ್ತಿ ಸಂಕಣ್ಣನಾಯಕರೆಂಬ ಬಿರುದಿತ್ತು. ಸಂಕಣ್ಣನಾಯಕರ ಬಲವೆಂದರೆ ಸಾವಿರಗತ್ತಿಯ ಬಲವೆಂಬ ಪ್ರತೀತಿ ಆ ನಾಡಿನಲ್ಲಿತ್ತು.

ಸಂಕಣ್ಣನಾಯಕರಷ್ಟೇ ಅವರ ಧರ್ಮಪತ್ನಿ ಗಂಗಾದೇವಿಯವರು ಆ ನಾಡಿನಲ್ಲಿ ಕೀರ್ತಿವಂತರಾಗಿದ್ದರು. ಗಂಗಾದೇವಿಯವರು ಗಂಗೆಯಷ್ಟೇ ಪುಣ್ಯವಂತರಿದ್ದರು. ನಿತ್ಯವೂ ಅವರ ಬಳಿ ನಾಡಿನ ತೊಂದರೆಗಳ ಬಗ್ಗೆ ದೂರುಗಳು ಬರುತ್ತಿದ್ದುವು. ಕಣ್ಣು ತುಂಬಾ ನೀರನ್ನು ತುಂಬಿಕೊಂಡು ಬಂದವರು ಗಂಗಾದೇವಿಯರ ಸಲಹೆಯಿಂದ ಅರಮನೆ ಬಿಟ್ಟು ಹೋಗುವಾಗ ನಗುತ್ತ ಹೋಗುತ್ತಿದ್ದರು. ನಿತ್ಯವೂ ಗಂಗಾದೇವಿಯರು ಒಂದು ನ್ಯಾಯಾಲಯವನ್ನೇ ನೆರೆಯಿಸುತ್ತಿದ್ದರು. ತಮ್ಮ ಪಾಳೆಯದಲ್ಲಿ ತಮ್ಮಿಂದ ಅಂತಹ ಅನ್ಯಾಯವಾದುದಾದರೆ ಅದನ್ನು ತಮ್ಮ ಪತಿಗೆ ಹೇಳಿ ಸರಿಪಡಿಸುತ್ತಿದ್ದರು. ಸಂಕಣ್ಣನಾಯಕರಿಗೂ ಗಂಗಾದೇವಿಯ ಮೇಲೆ ಒಳ್ಳೇ ಪ್ರೀತಿ ಮತ್ತು ಅಭಿಮಾನ. ಅವಳನ್ನು ತಮ್ಮ ಪಾಳೆಯದ ನ್ಯಾಯದೇವತೆಯೆಂದು ಬಗೆಯುತ್ತಿದ್ದರು. ಅವಳ ಮಾತನ್ನೆಂದೂ ಮೀರುತ್ತಿರಲಿಲ್ಲ. ಅವಳಿಗೆ ಬಾಲ್ಯದಿಂದಲೂ ಒಳ್ಳೇ ಶಿಕ್ಷಣ ದೊರೆತಿತ್ತು. ಸುಸಂಸ್ಕೃತ ಮನೆತನದಲ್ಲಿ ಬೆಳೆದು ಬಂದವಳು. ಅವಳ ಜಾಣ್ಮೆಗೆ, ಸಕಾಲ ಸಲಹೆಗೆ ಒಮ್ಮೊಮ್ಮೆ ಸಂಕಣ್ಣನಾಯಕರೇ ಬೆರಗಾಗುತ್ತಿದ್ದರು. ಅವರ ಪಾಳೆಯದಲ್ಲಿ ಸಮೃದ್ಧಿಯು ನಲಿಯುತ್ತಿತ್ತು. ದಾರಿದ್ರ್ಯವೆಂದರೇನೋ ಗೊತ್ತಿರಲಿಲ್ಲ. ಮಲೆನಾಡಿನ ಸೆರಗಿನಲ್ಲಿದ್ದ ಸವಣೂರು ಯಾವಾಗಲೂ ಬೆಳೆಗಳಿಂದ ತುಂಬಿರುತ್ತಿತ್ತು. ತಮ್ಮ ಪಾಳೆಯದಲ್ಲಿ ಯಾರಾದರೂ ಉಪವಾಸ ಬಿದ್ದುದಾದರೆ ಅವರಿಗೆ ಎದೆಯಲ್ಲಿ ಶೂಲವನ್ನು ತಿವಿದಷ್ಟು ವೇದನೆಯಾಗುತ್ತಿತ್ತು. ಅಂತಲೇ ರಾಜ್ಯದಲ್ಲಿಯ ಪ್ರಜೆಗಳ ಯೋಗಕ್ಷೇಮವನ್ನು ಅವರು ಮೇಲಿಂದಮೇಲೆ ತೆಗೆದುಕೊಳ್ಳುತ್ತಿದ್ದರು.

ಒಂದು ಸಲ ಸಂಕಣ್ಣನಾಯಕರ ಕಿವಿಗೆ ಊರಹೊರಗೆ ಮಾವಿನತೋಪಿನಲ್ಲಿ ಒಬ್ಬ ಭಿಕ್ಷುಕಿ ಮೂರು ದಿವಸಗಳಿಂದಲೂ ಉಪವಾಸ ಕುಳಿತಿರುವಳೆಂಬ ವಾರ್ತೆ ಬಿದ್ದಿತು. ಅವಳನ್ನು ನೋಡಿದವರು ಅವಳಿಗೆ ತಿನ್ನಲು ಹಣ್ಣು ಹಂಪಲುಗಳನ್ನು ಕೊಡಹೋದರೂ ಅವಳು ಏನನ್ನೂ ಸ್ವೀಕರಿಸುತ್ತಿರಲಿಲ್ಲ. ಆದರೆ ಉಪವಾಸದಿಂದ ಮಾತ್ರ ಬಳಲುತ್ತ ಕುಳಿತಿದ್ದಳು. ಜನರು ಕೇಳಿದರೆ ಅವರಿಗೆ ತನ್ನ ಮನಸ್ಸಿನ ವಿಚಾರವನ್ನು ಹೇಳುತ್ತಿದ್ದಳು. ಅವಳದು ಬಹು ವಿಚಿತ್ರ ಬೇಡಿಕೆಯಿತ್ತು. ಅವಳು ಏನನ್ನಾದರೂ ತಿನ್ನಬೇಕಿದ್ದರೆ ಅದು ಮನುಷ್ಯ

ಮಾಂಸ, ಕುಡಿಯಬೇಕಿದ್ದರೆ ಅದು ಮಾನವ ರಕ್ತ. ಆದರೆ ಅಂತಹ ವಸ್ತುಗಳನ್ನು ಅವಳಿಗಾರೀಯಬೇಕು ? ಯಾವ ವ್ಯಕ್ತಿ ತನ್ನ ಜೀವನವನ್ನು ಒಂದು ವ್ಯಕ್ತಿಯ ಹಸಿವೆಗಾಗಿ ಬಲಿಯನ್ನಾಗಿ ಕೊಡಬಲ್ಲ ?

ಸಂಕಣ್ಣನಾಯಕರು ಅವಳ ಈ ವಿಚಿತ್ರ ಬೇಡಿಕೆಯನ್ನು ಕೇಳಿ ಆಶ್ಚರ್ಯಪಟ್ಟರು ಅವರಿಗೆ ಅವಳು ತಮ್ಮ ಪಾಳೆಯದಲ್ಲಿ ಉಪವಾಸ ಬೀಳುವದು ಸರಿಯೆನಿಸಲಿಲ್ಲ. ತಾವೇ ತಮ್ಮ ದೇಹದ ರಕ್ತಮಾಂಸವನ್ನು ಅವಳಿಗೆ ಕೊಟ್ಟು ಅವಳ ಹೊಟ್ಟೆಯ ಹಸಿವನ್ನು ಹಿಂಗಿಸಿದರಾಯಿತೆಂದು ನಿರ್ಧರಿಸಿಕೊಂಡರು. ಪತಿಯ ನಿರ್ಧಾರವನ್ನು ಕೇಳಿ ಗಂಗಾದೇವಿಯರು ಅಂಜಿದರು. ತಮ್ಮ ಮಾಂಗಲ್ಯಕ್ಕೆ ಧಕ್ಕೆ ಬರುವದಲ್ಲಾ ಎಂದು ದುಃಖಿಸಿದರು. ಛೇ! ತಾನಿರುವಾಗ ತನ್ನ ಪತಿ ಏಕೆ ರಕ್ತವನ್ನೀಯಬೇಕು ? ಪತಿಯೇ ಸತಿಗೆ ಪರದೈವ ! ಪತಿಗಾಗಿ ತನ್ನ ದೇಹವನ್ನು ಕೊಟ್ಟರೆ ಸ್ವರ್ಗ ಸಿಕ್ಕುವದು. ನೇರವಾಗಿ ಮಹಾರಾಜ್ಞಿ ಗಂಗಾದೇವಿಯರು ತಮ್ಮ ಪತಿಯ ಬಳಿ ಹೋಗಿ ಆ ಭಿಕ್ಷುಕಿಯ ಹಸಿವೆಗೆ ತಾನು ಬಲಿಯಾಗಲು ಸಿದ್ಧಳಾಗಿರುವದಾಗಿ ಹೇಳಿದರು.

ಪಾಳಯಗಾರರಿಗೆ ತಮ್ಮ ಪತ್ನಿಯ ಮಾತು ಸಮ್ಮತವೆನಿಸಲಿಲ್ಲ. ತಾವು ರಾಜ್ಯದ ದೊರೆಗಳು, ಪ್ರಜೆಗಳ ಪೋಷಣೆಯ ಭಾರವು ತಮ್ಮ ಮೇಲಿದೆ, ತಮ್ಮ ರಾಜ್ಯದ ಶಾಂತಿಗಾಗಿ ತಾವು ಬೇರೊಬ್ಬರ ದೇಹವನ್ನು ಬಲಿಯಾಗಿ ಕೊಡುವದು ತಪ್ಪೆಂದೆನಿಸಿತು. ವಿಚಾರಿಸುತ್ತ " ಛೇ ! ದೇವಿಯರು ಇದನ್ನು ಹಚ್ಚಿಕೊಳ್ಳಬಾರದು. ನಾನು ನನ್ನ ರಕ್ತವನ್ನು ಆ ಭಿಕ್ಷುಕಿಗೆ ಕೊಡುವದರಿಂದ ನೀನು ಮಾಂಗಲ್ಯರಹಿತಳಾಗುವಿಯೆಂಬುದು ಬಲ್ಲೆ. ಆದರೆ ನನ್ನೆದುರು ನನ್ನ ಅರ್ಧಾಂಗಿಯನ್ನು ಕಳೆದುಕೊಳ್ಳುವದು ಸಾಧ್ಯವಿಲ್ಲ " ಎಂದು ನುಡಿದರು.

ಕೊನೆಗೆ ಗಂಗಾದೇವಿಯರೇ "ನಾವೀರ್ವರೂ ಆ ಭಿಕ್ಷುಕಿಯ ಎದುರು ನಿಲ್ಲೋಣ. ಅವಳಿಗೆ ಯಾವ ರಕ್ತವು ಬೇಕೋ ಅವರದನ್ನು ತೆಗೆದುಕೊಳ್ಳಲಿ " ಎಂದು ಹೇಳಿದರು.

ಆ ಮಾತು ದೊರೆಗಳಿಗೆ ಹಿಡಿಸಿತು. ಅವಳ ಬುದ್ಧಿಮತ್ತೆಗೆ ಮೆಚ್ಚಿದರು. ಸರಿ. ಆ ರೀತಿ ಪಾಳೆಗಾರರೂ ಅವರ ಧರ್ಮಪತ್ನಿಯೂ ತಮ್ಮ ದೇಹಗಳನ್ನರ್ಪಿಸಲು ಆ ಮಾವಿನ ತೋಪಿನ ಬಳಿಯಿದ್ದ ಭಿಕ್ಷುಕಿಯಲ್ಲಿ ಹೋದರು.

ಆವಳಿಗೂ ಸಂಕಣ್ಣನಾಯಕರ ರಾಜ್ಯದಲ್ಲಿ ಯಾರೂ ಉಪವಾಸ ಬೀಳುವದಿಲ್ಲ ವೆಂದು ಗೊತ್ತಿತ್ತು. ದೊರೆಯು ಪ್ರತ್ಯಕ್ಷವಾಗಿ ಪತ್ನಿಸಮೇತ ಆವಳಿಗೆ ರಕ್ತ ವನ್ನು ಕೊಡಲು ಬಂದಾಗ ಆವಳಿಗಾದ ಸಂತೋಷವೆಷ್ಟು! ಜನರು ಆ ದೃಶ್ಯ ವನ್ನು ನೋಡಲು ಬಂದಿದ್ದರು. ಅವಳ ವಿಚಿತ್ರ ಬೇಡಿಕೆಯನ್ನು ಕೇಳಿ ಕೆಲವ ರಿಗೆ ಆಶ್ಚರ್ಯವಾದರೆ, ಕೆಲವರಿಗೆ ಅವಳ ಮೇಲೆ ಕೋಪ ಬಂದಿತು. ಆವಳನ್ನು ಹರಿದು ತಿನ್ನುವಷ್ಟು ಅಂಜಿಸಿದರು. ದೊರೆಗಳು ಜನರನ್ನು ತಡೆಯದೆ ಹೋಗಿ ದ್ದರೆ ಅವಳ ದೇಹವನ್ನು ಹದ್ದು-ಕಾಗೆಗಳಿಗೆ ಹರಿದು ಚಲ್ಲಿಬಿಡುತ್ತಿದ್ದರು. ವಿನಯವದನರಾಗಿ ಸಂಕಣ್ಣನಾಯಕರು ತಮ್ಮ ದೇಹದ ರಕ್ತವನ್ನು ಕುಡಿದು ಉಪವಾಸವನ್ನು ಹಿಂಗಿಸಿಕೊಳ್ಳಬೇಕೆಂದು ಅವಳಿಗೆ ಬೇಡಿದರು. ಬದಿಯಲ್ಲಿ ನಿಂತಿದ್ದ ಗಂಗಾದೇವಿಯವರು ಬೇಕಿದ್ದಲ್ಲಿ ತಮ್ಮ ರಕ್ತವನ್ನು ತೆಗೆದುಕೊಳ್ಳ ಬೇಕೆಂದು ಕೇಳಿಕೊಂಡರು.

ಉಪವಾಸ ಕುಳಿತಿದ್ದ ಭಿಕ್ಷುಕಿಯ ಮುಖವು ನಿಸ್ತೇಜವಾಗಿತ್ತು. ಅವಳು "ನೀವಿಬ್ಬರೂ ಗಾದಿಯ ಒಡೆಯ ಒಡತಿಯರಿರುವಿರಲ್ಲವೆ ?" ಎಂದು ಕೇಳಿದಳು. ದಂಪತಿಗಳು ಅದಕ್ಕೆ ಸಮ್ಮತಿಯನ್ನು ಸೂಚಿಸಿದರು.

"ನಿಮ್ಮ ಯಾವ ಮಾತನ್ನೂ ನಿಮ್ಮ ಪ್ರಜೆಗಳು ಅಲ್ಲಗಳೆಯಲಾರರಷ್ಟೇ?" ಎಂದು ಮರುಪ್ರಶ್ನೆ ಹಾಕಿದಾಗ ಅಹುದೆಂದು ಉತ್ತರಿಸಿದರು.

"ಹಾಗಾದರೆ ನನಗಿಂದು ಹಸಿವೆಯಾಗಿದೆ. ನಿಮ್ಮಿಬ್ಬರನ್ನು ಬಿಟ್ಟು ಬೇರೆ ಯಾರಾದರೂ ತಮ್ಮ ದೇಹದ ರಕ್ತವನ್ನು ನನಗೆ ಕೊಡಲು ಸಿದ್ಧರಿರುವ ರೇನೋ ಕೇಳಿರಿ. ನಿಮ್ಮ ಮಾತನ್ನವರು ನಡೆಯಿಸುತ್ತಿದ್ದರೆ, ನೆರೆದ ಸಾವಿ ರಾರು ಪ್ರಜೆಗಳಲ್ಲಿ ಯಾರಾದರೂ ನಿಮ್ಮ ಮಾತಿಗೆ ಬೆಲೆಯನ್ನು ಕೊಡುವರೋ ಹೇಗೆ ಕೇಳಿ ನೋಡಿರಿ." ಎಂದಳು.

ನೆರೆದ ಪ್ರಜೆಗಳಲ್ಲಿ ಭಿಕ್ಷುಕಿಯ ಹಸಿವೆಗೆ ತಮ್ಮ ದೇಹದ ರಕ್ತವನ್ನು ಕೊಡಲು ಯಾರೂ ಸಿದ್ಧರಾಗಲಿಲ್ಲ. ಒಬ್ಬ ಭಿಕ್ಷುಕಿಯ ಆಶೆಗಾಗಿ ತಾವು ತಮ್ಮ ದೇಹವನ್ನು ಕೊಡುವದೆಂದರೆ ಅವರಿಗೆ ಸರಿಯೆನಿಸಲಿಲ್ಲ. ದೊರೆಗೆ ಕೆಡುಕೆ ನಿಸಿತು. ಪ್ರಜೆಗಳು ತಮ್ಮ ಮಾತನ್ನು ಕೇಳುವದಿಲ್ಲವೆಂದು ಅನಿಸಿತು. ಖಿನ್ನ

ಮನಸ್ಕರಾಗಿ ಭಿಕ್ಷುಕಿಯ ಎದುರು ತಲೆತಗ್ಗಿಸಿ ಸಂಕಣ್ಣನಾಯಕರು ಕುಳಿತರು. ಮತ್ತೆ ಭಿಕ್ಷುಕಿಯು "ಸಂಕಣ್ಣನಾಯಕರೆ, ವಿಷಣ್ಣವದನರಾದಿರಿ. ಇದು ಲೋಕಾನುರೂಢಿ. ಜನರಿಗೆ ಆಪರ ಹನಿರಕ್ತವೆಂದರೆ ಮಾಣಿಕ್ಯವಿದ್ದಂತೆ. ಯಾವ ವ್ಯಕ್ತಿಯೂ ತನ್ನ ಜೀವವನ್ನು ತಾನೇ ತಾನಾಗಿ ಕೊಡಲಾರ. ರಕ್ತದ ಬೆಲೆ ವ್ಯಕ್ತಿಗೆ ಹೆಚ್ಚು. ಅಂತಹ ಹನಿರಕ್ತವನ್ನು ನಿಮ್ಮಂಥ ದಾನಿಗಳ ವ್ಯತಿರಿಕ್ತ ಬೇರೆ ಯಾರೂ ಕೊಡರು. ನನ್ನ ಹಸಿವೆ ನಿಮಗೆ ವಿಚಿತ್ರವಾಗಿ ಕಂಡಿರಬೇಕಲ್ಲವೆ? ನಿಮ್ಮ ಪರೀಕ್ಷೆಗೆಂದೇ ಬಂದೆ. ನಿಮ್ಮ ರಾಜ್ಯದಲ್ಲಿ ನಿಮಗಾಗಿ ಹತ್ತು ಹನಿ ರಕ್ತವನ್ನು ಕೊಡುವವರಿಲ್ಲ. ಯುದ್ಧದಲ್ಲಿ ನೀವು ನೂರಾರು ಕೊಡ ರಕ್ತವನ್ನು ಭೂದೇವಿಯ ಮೇಲೆ ಸುರಿದು, ಮದೋನ್ಮತ್ತರಂತೆ ಶವಗಳ ಮೇಲೆ ತಾಂಡವವಾಡಿ, ಪ್ರಳಯದ ನಗು ನಕ್ಕು ವಿಜಯೋನ್ಮಾದದಿಂದ ಮನೆಗೆ ತೆರಳುತ್ತೀರಿ. ಅಲ್ಲಿ ನಿಮಗೆ ಹನಿ ರಕ್ತದ ಕಲ್ಪನೆ ಬಾರದು. ಆದರೆ ಇಲ್ಲಿ ನೋಡಿರಿ, ರಕ್ತದ ಬೆಲೆಯೇನೆಂಬುದನ್ನು."

ಇಷ್ಟೇ ಹೇಳಿ ಅವಳು ಮೌನ ತಾಳಿದಳು. ಸಂಕಣ್ಣನಾಯಕರಿಗೆ ಅವಳು ಹುಚ್ಚಿಯಲ್ಲ, ಭಿಕ್ಷುಕಿಯಲ್ಲ! ಅವಳೊಬ್ಬ ದೇವತೆಯೆಂದು ಭಾಸವಾಯಿತು. ಇದುವರೆಗೂ ಅವರು ತಮ್ಮ ತೋಳಶಕ್ತಿಯಿಂದ ನೂರಾರು ಕೊಡ ರಕ್ತಾಭಿಷೇಕವನ್ನು ಭೂದೇವಿಗೆ ಮಾಡಿಸಿದ್ದರು. ತಾವು ಯುದ್ಧ ಮಾಡುವದು ಅನ್ಯಾಯವೆಂದು ತಿಳಿದರೂ ಯುದ್ಧದ ಮದದಿಂದ ಉಬ್ಬುತ್ತಿದ್ದ ಅವರ ದೇಹವಿಂದು ಎಡರಿತು. ಅವರ ಮಹತ್ವಾಕಾಂಕ್ಷೆಗೆ ಇಂದು ಭಿಕ್ಷುಕಿಯೊಬ್ಬಳು ಕೊಡಲಿ ಏಟನ್ನಿತ್ತಳು. ಸರಿ. ಅಂದೇ ಇನ್ನು ಮುಂದಕ್ಕೆ ಯುದ್ಧ ಮಾಡಲಾರೆನೆಂದು ಪಣತೊಟ್ಟರು. ಹನಿ ರಕ್ತಕ್ಕೆ ತಮ್ಮ ರಾಜ್ಯದ ಪ್ರಜೆಗಳಲ್ಲಿ ಇಷ್ಟು ಬೆಲೆಯಿರುವಾಗ ಅದನ್ನು ತಾವು ವ್ಯರ್ಥಗೊಳಿಸುವದಕ್ಕೆ ವಿಷಾದವೆನಿಸಿತು. ಶಾಂತರೀತಿಯಿಂದ, ಅಹಿಂಸೆಯಿಂದ, ಧರ್ಮದಿಂದ ರಾಜ್ಯವಾಳಲು ನಿರ್ಧರಿಸಿದರು. ಮುಂದೆ ಆ ಭಿಕ್ಷುಕಿ ಅದೆಲ್ಲಿಯೋ ಮರೆಯಾದಳು.

ಅಂದಿನಿಂದ ಸಂಕಣ್ಣನಾಯಕರ ಮನಸ್ಸು ಒಂದು ತೆರನಾಯಿತು. ಪ್ರತಿಕ್ಷಣಕ್ಕೂ ತಮ್ಮ ರಾಜ್ಯದ ಗಾದಿ ಮುಳ್ಳಿನ ಗಾದಿಯೆಂಬ ಭಾಸವಾಯಿತು. ತಾವು ಪ್ರಜೆಗಳಿಗೆ ಹಿತವನ್ನೇ ಬಯಸುವೆನೆಂಬ ಭಾವನೆಯನ್ನು ಆದುವರೆಗೂ

ಅವರಿಟ್ಟುಕೊಂಡಿದ್ದರು. ಯುದ್ಧದಲ್ಲಿ ತಮ್ಮ ಕತ್ತಿ ಎಷ್ಟು ಜನ ಸೈನಿಕರ ಆಹುತಿಯನ್ನು ತೆಗೆದುಕೊಂಡಿತಲ್ಲಾ ಎಂದು ವಿಷಾದಿಸಿದರು. ಯುದ್ಧದ ಭೀಕರ ಚಿತ್ರವು ಕಣ್ಣೆದುರಿಗೆ ಬಂದರೆ ಚೀರುವಷ್ಟು ಅಂಜಿಕೆ ಎನಿಸಹತ್ತಿತು. ತಾವು ತಮ್ಮ ಜೀವನದಲ್ಲಿ ಅದೆಲ್ಲಿಯೋ ತೂಕತಪ್ಪಿ ನಡೆಯುತ್ತಿರುವೆನೆಂದು ಭಾಸವಾಗಹತ್ತಿತು.

ಈ ರೀತಿ ಅವರ ಮನಸ್ಸು ವ್ಯಗ್ರವಾದಾಗ ಅವರ ದೊರೆಯಾದ ಬಂಕಾಪುರದ ರಾಜರಿಂದ ಓಲೆಯೊಂದು ಬಂದಿತು. ಅವರ ರಾಜ್ಯದ ಗಡಿ ಪ್ರದೇಶ ಒಂದರಲ್ಲಿ ಪರನಾಡಿನ ರಾಜರು ಪ್ರವಿಷ್ಟರಾಗಿದ್ದರಿಂದ ಅವರನ್ನು ಸದೆಬಡೆಯಲು ಕರೆಬಂದಿತ್ತು. ಸಂಕಣ್ಣನಾಯಕರು ತಮ್ಮ ಸಾವಿರ ಜನ ವಿಶ್ವಾಸಿಕ ಸೈನಿಕರನ್ನು ಕರೆದುಕೊಂಡು ಬರಬೇಕೆಂದು ಆಜ್ಞೆಯಿತ್ತು. ದೊರೆಗಳ ಆಜ್ಞಾಪತ್ರವನ್ನು ನೋಡಿ ಸಂಕಣ್ಣನಾಯಕರು ತಳಮಳಿಸಿದರು. ತಾವು ಯುದ್ಧವನ್ನು ಮಾಡಲೇಬಾರದೆಂಬ ನಿರ್ಧಾರವನ್ನು ಮಾಡಿರುವಾಗ, ದೊರೆಯ ಮಾತಿಗೆ ಅದೆಂತು ಮನ್ನಣೆಯನ್ನೀಯಬೇಕೆಂಬುದೇ ತಿಳಿಯದಾಯಿತು.

ಆ ಓಲೆ ನೋಡಿ ಗಂಗಾದೇವಿಯರೂ ಕ್ಷಣಕಾಲ ಚಿಂತಾತುರರಾದರು. ಪತಿಗೆ ಏನು ಹೇಳಬೇಕೆಂಬುದೇ ತಿಳಿಯದಾಯಿತು. ಯೋಚಿಸಿ, ನನಗೆ ಇದಕ್ಕೆ ಸಮ್ಮತಿಯಿಲ್ಲವೆಂದು ತಿಳಿಸಿಬಿಡಿರಿ ಎಂದು ಹೇಳಿದರು. ಮತ್ತೆ ಸಂಕಣ್ಣನಾಯಕರು ಚಿಂತಾತುರರಾದರು. ಯಾರ ಕೃಪೆಯಿಂದ ಗಾದಿ ದೊರೆತಿದೆಯೊ ಅಂಥ ಪ್ರಭು ಯುದ್ಧಕ್ಕೆ ಬಾ ಎಂದು ಆಹ್ವಾನಿಸಿದಾಗ ಅದನ್ನು ನಿರಾಕರಿಸಿದರೆ ತಮ್ಮ ಗಾದಿಯ ಗತಿ ಏನು? ಕೊನೆಗೆ ಗಂಗಾದೇವಿಯರ ಅನುಮತಿಯಿಂದ ಸಂಕಣ್ಣನಾಯಕರು ತಮಗೆ ಆ ಕಾರ್ಯವು ಸಾಧ್ಯವಿಲ್ಲೆಂದು ತಿಳಿಸಿದರು. ಅಶ್ವಾರೋಹಿಯು ಮಾರುತ್ತರವನ್ನು ಹೊತ್ತುಕೊಂಡು ಬಂಕಾಪುರ ರಾಜಧಾನಿಯನ್ನು ತಲುಪಿದ ರಾತ್ರಿಯೇ, ಬಂಕಾಪುರ ರಾಜರ ಸೈನ್ಯವು ಬಂದು ಸಂಕಣ್ಣನಾಯಕ ಮತ್ತು ಗಂಗಾದೇವಿಯರನ್ನು ಬಂಧಿಸಿತು.

ಅವರ ಬಂಧನದ ವಾರ್ತೆಯು ಅವರ ಕೈಕೆಳಗಿನ ಸಾವಿರ ಜನ ಸೈನಿಕರಿಗೆ ತಿಳಿದಾಗ ಅವರು ಧಾವಿಸಿ ಬಂದರು. ಸಂಕಣ್ಣನಾಯಕರು ತಡೆಯದೆ ಹೋಗಿದ್ದರೆ, ಆ ಬಂಕಾಪುರ ಸೈನಿಕರ ಇತಿಶ್ರೀಯಾಗಿಯೇ ಹೋಗುತ್ತಿತ್ತು.

ಬಂಕಾಪುರ ರಾಜಧಾನಿಗೆ ಅವರನ್ನು ಕರೆದೊಯ್ದರು. ದೊರೆಯ ಆಜ್ಞೆಯನ್ನು ಭಂಗಿಸಿದ್ದಕ್ಕೆ ಅವರು ರಾಜ್ಯಶಾಸನದ ದೃಷ್ಟಿಯಲ್ಲಿ ಅಪರಾಧಿಗಳಾಗಿದ್ದರು. ಸಂಕಣ್ಣನಾಯಕರಂಥ ನಿಷ್ಠಾವಂತ ಪಾಳೆಯಗಾರರು ಅದು ಹೇಗೆ ದೊರೆಗಳ ಮಾತನ್ನು ನಿರಾಕರಿಸಿದರೆಂದು ರಾಜ್ಯದ ತುಂಬಾ ಆಶ್ಚರ್ಯವಾಯಿತು. ಸಂಕಣ್ಣನಾಯಕರಿಗೆ ತಮ್ಮ ತತ್ವವು ರಾಜ್ಯಶಾಶನಕ್ಕಿಂತ ಹಿರಿದೆನಿಸಿತು. ತಾವು ಒಮ್ಮೆ ಯುದ್ಧವನ್ನು ಮಾಡಬಾರದೆಂಬ ಮನೋನಿರ್ಧಾರ ಮಾಡಿದ ಮೇಲೆ, ಅವರಿಗೆ ಯಮರಾಯನು ಬಂದು ಎದುರಿಗೆ ನಿಂತರೂ ಅಂಜಿಕೆ ಎನಿಸಲಿಲ್ಲ.

ನ್ಯಾಯಾಲಯದಲ್ಲಿ ಬಂಕಾಪುರ ರಾಜ್ಯದ ಶ್ರೇಷ್ಠ ಪಾಳೆಯಗಾರರಾದ ತಾವು ಮತ್ತು ತಮ್ಮ ಧರ್ಮಪತ್ನಿ ಗಂಗಾದೇವಿಯರು ಅಪರಾಧಿಗಳೆಂದು ಸಂಕಣ್ಣನಾಯಕರು ತಾವೇ ಒಪ್ಪಿದರು. ಗಂಗಾದೇವಿಯರು ಸಂಕಣ್ಣನಾಯಕರ ಬಲಗೈಯಂತಿದ್ದುದರಿಂದ ಅವರನ್ನು ಬಂಧಿಸಲಾಗಿತ್ತು. ಬಂಕಾಪುರದ ದೊರೆಯು ನ್ಯಾಯವನ್ನು ನಿರ್ಣಯಿಸಿ ಇಬ್ಬರಿಗೂ ಮರಣದಂಡನೆಯನ್ನು ವಿಧಿಸಿದನು. ಅಲ್ಲಿ ನೆರೆದ ಜನವೆಲ್ಲ ದುಃಖಪಟ್ಟಿತು. ನಾಯಕರು ಕ್ಷಮೆಯ ಒಂದು ಮಾತನ್ನು ಕೇಳಿದರೆ, ದೊರೆಗಳು ಮನ್ನಿಸಿಬಿಡಬಹುದಿತ್ತಲ್ಲ ಎಂದು ಕೂಡಿದ ಪ್ರಜೆಗಳು ನೊಂದುಕೊಂಡರು. ಮರಣದಂಡನೆಯ ಆಜ್ಞೆಗೆ ದೊರೆಗಳ ಅಂಕಿತ ಬಿದ್ದ ಮೇಲೆ ಪರಂಪರೆಗನುಸರಿಸಿ ಸಂಕಣ್ಣನಾಯಕರ ಕೊನೆಯಾಶೆಗಳೇನಾದರೂ ಇವೆಯೇ ಎಂದು ದೊರೆಗಳು ಕೇಳಿದರು. ಮರಣವನ್ನು ಸಂತೋಷದಿಂದ ಅಪ್ಪಿಕೊಳ್ಳುವದನ್ನು ಬಿಟ್ಟು ತಮಗೆ ಬೇರಾವ ಕೊನೆಯಾಶೆಯಿಲ್ಲವೆಂದು ನಾಯಕರು ಹೇಳಿದರು. ಅದೇ ರೀತಿ ಗಂಗಾದೇವಿಯರಿಗೂ ದೊರೆಗಳು ಪ್ರಶ್ನೆ ಕೇಳಿದರು. " ನನಗೆ ಬಹು ನೀರಡಿಕೆಯಾಗಿದೆ. ಕುಡಿಯುವ ನೀರನ್ನಷ್ಟು ಕೊಟ್ಟರೆ ಕುಡಿದು ಪತಿಯೊಡನೆ ಆನಂದದಿಂದ ಸಾಯುತ್ತೇನೆ " ಎಂದು ಅವರು ಹೇಳಿದರು. ಅಲ್ಲಿಯೇ ನಿಂತಿದ್ದ ರಾಜಸೇವಕನು ಕನಕದ ಪಾತ್ರೆಯೊಂದರಲ್ಲಿ ನೀರನ್ನು ತಂದು ಗಂಗಾದೇವಿಯುವರಿಗೆ ಕೊಟ್ಟನು. ಅವರು ಕೈದಿಗಳಾಗಿದ್ದರೂ ಗಾದಿಯ ಒಡೆಯರಿದ್ದುದರಿಂದ, ರಾಜೋಚಿತ ಮರ್ಯಾದೆಗಳು ಕೊಡಲ್ಪಟ್ಟವು.

ಗಂಗಾದೇವಿಯರು ಕನಕದ ಪಾತ್ರೆಯಲ್ಲಿ ಸೇವಕನು ಕೊಟ್ಟ ನೀರನ್ನು ಕೈಯಲ್ಲಿ ಹಿಡಿದುಕೊಂಡು ವಿಚಾರಿಸುತ್ತ ಹಾಗೆಯೇ ನಿಂತರು. ಅವರಿಗೆ ನೀರನ್ನು ಕುಡಿಯಬೇಕೇ ಅಥವಾ ಬೇಡವೇ ಎಂಬ ಸಂಶಯ ಬಂದಿರಬೇಕು. ಗಂಗಾದೇವಿಯರು ಈರೀತಿ ನೀರನ್ನು ಕುಡಿಯಲು ಸಂಶಯ ತಾಳಿರುವದನ್ನು ನೋಡಿ ದೊರೆಗಳು ಆಶ್ಚರ್ಯಪಟ್ಟರು. ನಿಮಿಷಗಳ ಮೇಲೆ ನಿಮಿಷಗಳು ಜಾರಿದರೂ ಗಂಗಾದೇವಿಯರ ಕೈಯಲ್ಲಿಯ ನೀರಿನ ಪಾತ್ರೆ ತುಟಿಯ ವರೆಗೂ ಹೊಗಲಿಲ್ಲ. ದೊರೆಗಳು "ದೇವಿಯರು ನೀರನ್ನು ಕುಡಿಯಬೇಕು. ಆ ಪಾತ್ರೆ ಯಲ್ಲಿಯ ನೀರನ್ನು ನೀವು ಕುಡಿಯದ ಮುನ್ನ ನಿಮಗೆ ಮರಣದಂಡನೆಯಿಲ್ಲ" ಎಂದು ನುಡಿದರು. ಆದರೂ ದೇವಿಯರು ಕೈಯಲ್ಲಿಯ ಪಾತ್ರೆಯನ್ನು ಹಾಗೆಯೇ ಹಿಡಿದುಕೊಂಡು ನಿಂತರು. ದೊರೆಗಳು "ಬೇಗನೇ ಕುಡಿದು ನೀರಡಿಕೆಯನ್ನು ಹಿಂಗಿಸಿಕೊಳ್ಳಿರಿ. ಆ ಪಾತ್ರೆಯಲ್ಲಿಯ ನೀರನ್ನು ಕುಡಿಯದ ಮುನ್ನ ನಿಮ್ಮಿರ್ವ ರನ್ನು ವಧಸ್ತಂಭಕ್ಕೆ ತೆಗೆದುಕೊಂಡು ಹೋಗಲಾರೆವೆಂದು ನಾನು ಆಶ್ವಾಸನ ವನ್ನು ಕೊಟ್ಟರೂ ಸಂಶಯವೇ? ನಾನು ಬಂಕಾಪುರ ರಾಜ್ಯದ ದೊರೆ, ಕೊಟ್ಟ ಮಾತನ್ನೆಂದಿಗೂ ತಪ್ಪದೆ ನಡೆಯಿಸಿಕೊಡುವವನು" ಎಂದು ದರ್ಪ ದಿಂದ ಮಾತಾಡಿದರು.

ಆ ಮಾತನ್ನು ಕೇಳಿದವರೆ ದೇವಿಯರು ಕೈಯಲ್ಲಿಯ ಕನಕದ ಪಾತ್ರೆ ಯನ್ನು ಮೇಲಕ್ಕೆತ್ತಿದರು. ಸೇರಿದ ಪ್ರಜೆಗಳೆಲ್ಲಾ ಇನ್ನು ದಂಪತಿಗಳನ್ನು ವಧ ಸ್ತಂಭಕ್ಕೆ ಒಯ್ಯುವರಲ್ಲಾ ಎಂದು ಮರುಗಿದರು. ಪಾತ್ರೆಯನ್ನು ಮೇಲಕ್ಕೆತ್ತಿ ದೇವಿಯವರು ಬೀಸಿ ಕೈಯಿಂದ ಆಚೆಗೆ ಒಗೆದರು. ನೀರು ಭೂಮಿಯ ಪಾಲಾ ಯಿತು. ದೇವಿಯರಿಗೆ ಕೋಪ ಬಂದಿರಬೇಕೆಂದು ಅನಿಸಿತು. ದೇವಿಯರು "ನಮ್ಮ ಬಿಡುಗಡೆ ಇನ್ನಾಗಬೇಕು ಮಹಾರಾಜ" ಎಂದು ನಗುತ್ತ ಹೇಳಿದರು.

"ಕಾರಣವೇನು?" ಎಂದು ಆಶ್ಚರ್ಯಪಟ್ಟು ದೊರೆಗಳು ಕೇಳಿದರು.

"ಸ್ವಾಮಿ, ಇದೀಗ ತಾವು ನನಗೆ ಆ ಪಾತ್ರೆಯಲ್ಲಿಯ ನೀರನ್ನು ಕುಡಿ ಯದ ಮುನ್ನ ಮರಣವಿಲ್ಲೆಂದು ಆಶ್ವಾಸನ ಕೊಟ್ಟಿದ್ದಿರಲ್ಲವೆ? ಆ ಪಾತ್ರೆಯ ನೀರು ಇದೀಗ ಭೂಮಿಯ ಪಾಲಾಗಿದೆ. ಆ ಭೂಮಿಯಲ್ಲಿ ಸೇರಿಹೋದ ನನ್ನ ನೀರನ್ನಾದರೂ ಕೊಡಿರಿ. ಇಲ್ಲವೆ ಆ ನೀರನ್ನು ಕೊಡುವದು ಸಾಧ್ಯವಿಲ್ಲವೆಂದು ಬಿಡುಗಡೆ ಮಾಡಿಸಿರಿ" ಎಂದು ಹೇಳಿದರು.

ಗಂಗಾದೇವಿಯರ ಮಾತು ದೊರೆಗಳಿಗೆ ಹಿಡಿಸಿತು ಅವರ ನ್ಯಾಯ ಬುದ್ಧಿಗೆ ಅವರೀರ್ವರನ್ನು ವಧಿಸುವದು ಅಪರಾಧವೆನಿಸಿತು. ಅವರ ಬಿಡುಗಡೆ ಯಾಯಿತು. ರಾಜ್ಯದ ಪ್ರಜೆಗಳಿಗೆಲ್ಲ ಸಂತೋಷವಾಯಿತು. ಗಂಗಾದೇವಿ ಯರ ಜಾಣ್ಮೆಗೆ ಸವಣೂರೇ ತಲೆದೂಗಿತು. ಅವರಿಗೆ ಪುನಃ ಸವಣೂರಿನ ಗಾದಿಯನ್ನು ಕೊಟ್ಟರೂ ಅವರು ಸ್ವೀಕರಿಸಲಿಲ್ಲ. ಅವರಿಗೆ ರಾಜ್ಯದ ಗಾದಿ ಯೆಂದರೆ ಮುಳ್ಳಿನ ಹಾಸಿಗೆಯೆನಿಸಿತ್ತು. ಅವರ ಹಿಂದಿನ ಸೇವೆಗಾಗಿ ಬಂಕಾ ಪುರದ ದೊರೆಯು, ಸವಣೂರಿನಲ್ಲಿದ್ದ ತಮ್ಮ ತೋಟವನ್ನು ಇನಾಮಾಗಿ ಕೊಟ್ಟನು. ಅವರು ಸಾಯುವವರೆಗೆ ಆ ತೋಟವನ್ನು ತಾವೇ ಸ್ವತಃ ಮಾಡಿ ತಮಗೆ ಬೇಕಾದಷ್ಟೇ ಬೆಳೆಯನ್ನಿಟ್ಟುಕೊಂಡು ಉಳಿದುದನ್ನು ದಾನ ಮಾಡುತ್ತಿ ದ್ದರು. ಅವರ ಪುಣ್ಯಬಲದಿಂದ ಅವರ ದಾನ ಮಾಡಿದಷ್ಟು ಬೆಳೆಯನ್ನೀಯು ತ್ತಿತ್ತು. ಕಾಲಾನಂತರ ಅವರ ಮನೆಯವರು ನಮ್ಮ ಮನೆತನದ ಹಿರಿಯರಿಗೆ ಒತ್ತೆ ಹಾಕಿದರಂತೆ.

ಕತಬಿಯನ್ನು ಕೇಳಕ್ಕಿಟ್ಟು ಪದ್ಮಳನ್ನು ನೋಡಿದಾಗ ಅವಳು ಶಿಲಾ ಮೂರ್ತಿಯಂತೆ ಕತೆಯಲ್ಲಿ ತಲ್ಲೀನಳಾಗಿದ್ದಳು. ಅಂತಲೇ ಆ ತೋಟಕ್ಕೆ ಸಾವಿರಗತ್ತಿ ಸಂಕಣ್ಣನ ತೋಟವೆಂದೂ, ಸಾವಿರಗತ್ತಿ ತೋಟವೆಂದೂ ಕರೆಯು ತ್ತಾರೆ.




# ವಿಷದುಂಗುರ

ಪುಲಿಕೇಶಿಯ ಕಾಲದ ಒಂದು ದೇವಾಲಯವು ಡಂಬಳದಲ್ಲಿ ಇನ್ನೂ ತಲೆಯೆತ್ತಿ ನಿಂತಿದೆ. ಅಂದಿನ ಕಾಲದ ಶಿಲಾಶಾಸ್ತ್ರ ನೈಪುಣ್ಯವನ್ನು ಈ ದೇಗುಲದಲ್ಲಿ ನಾವು ಕಾಣಬಹುದು. ದೊಡ್ಡಬಸಪ್ಪನ ದೇವಾಲಯವು ನಿಜವಾಗಿಯೂ ದೊಡ್ಡದು. ಆದರೆ ದೊಡ್ಡಬಸಪ್ಪನ ಮೂರ್ತಿ ಮಾತ್ರ ಚಿಕ್ಕದು. ದೇಗುಲದ ಆಕಾರಕ್ಕೆ ತಕ್ಕ ಮೂರ್ತಿಯಿಲ್ಲವೆಂದು ಬಂದವರು ಮಾತನಾಡುತ್ತಾರೆ.

ಪೂರ್ವದಲ್ಲಿ ಪುಲಿಕೇಶಿಯ ರಾಜ್ಯವಾದ ಡಂಬಳದ ಬಳಿಯಲ್ಲಿ ಒಂದು ಮಹಾ ಸಂಗ್ರಾಮವು ಜರುಗಿತು. ಸೇನಾನಿಗಳ ರಕ್ತವು ಡಂಬಳ ರಾಜ್ಯದ ಮಣ್ಣಿನಲ್ಲಿ ಬೆರೆತುದರಿಂದ ಮಣ್ಣು ಅಷ್ಟು ಫಲವತ್ತಾದುದಲ್ಲವೆಂದು ಅಲ್ಲಿನ ಹಿರಿಯರು ಹೇಳುತ್ತಾರೆ. ಆ ಮಾತೇನೋ ಇಂದಿನ ಜನಕ್ಕೆ ನಿಜವೆನಿಸದೆ ಹೋದರೂ ಮೇಘರಾಜನ ಅವಕೃಪೆಯಿಂದಲೋ, ಭೂಮಿಯ ವೈಗುಣದಿಂದಲೋ ಅಲ್ಲಿಯ ಜನರು ಅನ್ನಕ್ಕಾಗಿ ಬನ್ನವನ್ನು ಪಡಬೇಕಾಗುವದು. ಡಂಬಳದ ಬಳಿ ಒಂದು ವಿಶಾಲವಾದ ಕೆರೆಯಿದೆ. ಅದರಲ್ಲಿ ನಿಂತ ನೀರು ಅನೇಕ ವರುಷಗಳ ವರೆಗೂ ಅಲ್ಲಿಯ ಭೂಮಿಯನ್ನು ತಣಿಸುತ್ತದೆ. ಅಂತಲೇ ಡಂಬಳದ ಕೆರೆಯೆಂದರೆ ಆ ಭಾಗದ ದೇವರಿದ್ದಂತೆ. ಪ್ರತಿವರುಷವೂ ದೊಡ್ಡಬಸಪ್ಪನ ಜಾತ್ರೆಯಲ್ಲಿ ಕೆರೆಗೆ ಪೂಜೆ ನೈವೇದ್ಯಗಳಾಗಬೇಕು. ಪುಣ್ಯವಂತರಿಗೆ ಅಂದು ಕೆರೆಯ ಆಚೆಯ ದಡದಲ್ಲಿ ಒಂದು ಉಂಗುರದಾಕಾರದ ತೆರೆಯೆದ್ದು ಮತ್ತೆ ಮಾಯವಾದದ್ದು ಕಾಣುವದೆಂಬ ವದಂತಿಯಿದೆ. ಇಂದಿಗೂ ಆ ಜಾತ್ರೆಗೆ ಸಾವಿರಾರು ಜನರು ನೆರೆಯುತ್ತಾರೆ. ಕೆರೆಯನ್ನು ಪೂಜಿಸುವ ಕಾಲಕ್ಕೆ ತಮ್ಮ ತಮ್ಮ ಇಷ್ಟಕಾರ್ಯಗಳ ಸಿದ್ಧಿಗಾಗಿ ಮಲ್ಲವ್ವನನ್ನು ಬೇಡಿಕೊಳ್ಳುತ್ತಾರೆ.

ಮಲ್ಲವ್ವನೆಂದರೆ ಆ ಕೆರೆಯನ್ನು ಪ್ರತಿನಿಧಿಸುವ ದೇವತೆಯು! ಆ ಕೆರೆಗೆ ಒಂದು ಇತಿಹಾಸವಿದೆ!

ಹಿಂದಿನ ಕಾಲದ ಕಥೆಯಿದು. ದೊಡ್ಡಬಸಪ್ಪನೆಂದರೆ ಡಂಬಳ ರಾಜ್ಯದಲ್ಲಿಯ ಒಬ್ಬ ಪ್ರತಿಭಾವಂತ ವ್ಯಕ್ತಿ. ಪುಲಿಕೇಶಿ ದೊರೆಯ ನಾಡಿನ ಪ್ರಥಮ ದರ್ಜೆಯ ಶ್ರೇಷ್ಠಿ! ಅವನ ಮನೆಯಲ್ಲಿ ರಾಜ್ಯಲಕ್ಷ್ಮಿಯೇ ಕಾಲು ಮುರಿದುಕೊಂಡು ಬಿದ್ದಿರುವಳೆಂದು ಜನರಾಡಿಕೊಳ್ಳುತ್ತಾರೆ. ರಾಜ್ಯದಲ್ಲಿ ಸಮಾರಂಭ ಜರುಗಿದರೆ ಪುಲಿಕೇಶಿಯ ದರ್ಬಾರದಲ್ಲಿ ದೊಡ್ಡಬಸಪ್ಪನಿಗೆ ಪ್ರಥಮಾಸನದ ಸನ್ಮಾನ ದೊರೆಯುತ್ತದೆ. ಆದರೆ ಅವನು ತನ್ನ ಸಂಪತ್ತಿಗಾಗಿ ರಾಜ್ಯದಲ್ಲಿ ಎಷ್ಟು ಪ್ರಸಿದ್ಧಿಯನ್ನು ಹೊಂದಿದ್ದನೋ ಅಷ್ಟೇ ಕುಪ್ರಸಿದ್ಧಿಯನ್ನು ಜಿಪುಣತನದಲ್ಲಿ ಪಡೆದಿದ್ದನು. ದೊಡ್ಡಬಸಪ್ಪನ ಒಂದೊಂದು ಕಾಸೆಂದರೆ ದರಿದ್ರರ ರಕ್ತದ ಹನಿಯೆಂದು ಊರಿನ ಹಿರಿಯರು ಹೇಳುತ್ತಿದ್ದಾರೆ. ದೊಡ್ಡಬಸಪ್ಪನು ಇಂದು ಮುಂಜಾನೆ ಉಂಡರೆ ಮೂರು ದಿನವೂ ಅದರ ಮೇಲೆ ಸಾಗಿಸಿ ನಾಲ್ಕನೇ ದಿವಸ ಮುಂಜಾನೆ ಉಣ್ಣುತ್ತಾನೆ.

ಆತನ ತಂದೆ ತೀರಲು ಸೋದರಮಾವನು ದೊಡ್ಡಬಸಪ್ಪನಿಗೆ ಮದುವೆಯನ್ನು ಮಾಡಿದನು. ಮಲ್ಲವ್ವನನ್ನು ಮದುವೆ ಮಾಡಿಕೊಂಡು ಮನೆ ತುಂಬಿಸುವ ಕಾಲಕ್ಕೆ ದೊಡ್ಡಬಸಪ್ಪನು ಅವಳನ್ನು ನಡೆಯಿಸಿಕೊಂಡೆ ಬಂದುದಕ್ಕೆ ಡಂಬಳದ ಜನರು ಹಾಸ್ಯ ಮಾಡಿದರು. ಮನೆತುಂಬಾ ಸಂಪತ್ತನ್ನಿಟ್ಟುಕೊಂಡು ಜೋಡೆತ್ತಿನ ಗಾಡಿಗಾಗಿ ಜಿಪುಣತನವನ್ನು ಮಾಡಿದನೆಂದು ನಕ್ಕರು. ಮಲ್ಲವ್ವನು ಮೈತುಂಬಾ ವಸ್ತುಗಳನ್ನು ಇಟ್ಟುಕೊಂಡು ಬಂದಿದ್ದಳು. ಮನೆಗೆ ಬಂದ ಕೂಡಲೆ ಎಲ್ಲ ವಸ್ತುಗಳನ್ನು ದೊಡ್ಡಬಸಪ್ಪನು ಇಸಗೊಂಡು ಬಿಟ್ಟನು. ದೇಹದ ಮೇಲೆ ಧರಿಸಿದರೆ ಮನುಷ್ಯನ ಉಷ್ಣತೆಯಿಂದ ಬಂಗಾರವು ಸವೆಯಬಹುದೆಂದು ಅವನ ವಾದ. ಮಲ್ಲವ್ವನು ಎಲ್ಲವನ್ನೂ ಕೊಟ್ಟಳು. ಆದರೆ ಎಡಗೈಯಲ್ಲಿಟ್ಟಿದ್ದ ವಜ್ರದ ಉಂಗುರವನ್ನು ಮಾತ್ರ ಕೊಡಲಿಲ್ಲ. ಅದು ತನ್ನ ತಾಯಿಯಿಂದ ಬಂದುದರಿಂದ ಕೊಡಲು ಒಪ್ಪಲಿಲ್ಲ. ವಜ್ರದ ಉಂಗುರವು ಬೆಲೆಯುಳ್ಳದ್ದು. ಹಳ್ಳಿನ ಕೆಳಗೆ ಡಬ್ಬಿಯಾಕಾರದ ಒಂದು ಭಾಗವಿತ್ತು.

ಮಲ್ಲವ್ವನ ಸಂಸಾರವು ಪ್ರಾರಂಭವಾಯಿತು. ನಿತ್ಯವೂ ಕೆರೆಗೆ ನೀರು

ತರಲು ಹೋದಾಗ ದೊಡ್ಡಬಸಪ್ಪನ ಜಿಪುಣತನದ ಬಗ್ಗೆ ನಡೆದ ಮಾತು ಗಳನ್ನು ಕೇಳುತ್ತಿದ್ದಳು. ಅವಳಿಗೆ ರವಿಯನ್ನು ಪಡುವಣದಲ್ಲಿ ಮುಳುಗಿಸು ವದು ಸುಲಭವಿತ್ತು. ಆದರೆ ದೊಡ್ಡಬಸಪ್ಪನ ಗುಣವನ್ನು ಸುಧಾರಿಸುವದು ಸಾಧ್ಯವಿದ್ದಿದ್ದಿಲ್ಲ. ಮನೆಯಲ್ಲಿದ್ದ ಜೋಳವನ್ನು ನಿತ್ಯವೂ ಆತನೇ ಅಳೆದು ಹೆಂಡತಿಗೆ ಕೊಡಬೇಕು. ನಂತರ ಬೀಸಿ ಮಲ್ಲವ್ವನ ರೊಟ್ಟಿಯು ಪ್ರಾರಂಭ ವಾಗಬೇಕು. ದೊಡ್ಡ ದೊಡ್ಡ ಹಬ್ಬಗಳು ಬಂದರೆ ಕೀಲಿ ಹಾಕಿಟ್ಟಿದ್ದ ಬೆಲ್ಲದ ಕರಣೆಯೊಂದನ್ನು ಮಲ್ಲವ್ವನಿಗೆ ಕೊಡಬೇಕು. ಅದೇ ಹಬ್ಬದ ಪ್ರತೀಕ. ದೊಡ್ಡಬಸಪ್ಪನ ಸಮಸ್ಯೆಯು ಮಲ್ಲವ್ವನಿಗೆ ಒಂದು ಒಡೆಯಲಾರದ ಒಗಟ ವಾಯಿತು.

ಮಲ್ಲವ್ವನು ಬಂದ ವರುಷವೇ ಡಂಬಳದಲ್ಲಿ ಮಳೆಯು ಬರಲಿಲ್ಲ. ನಂತರ ವರುಷವರುಷಕ್ಕೂ ಮೇಘರಾಜನ ಅವಕೃಪೆಯಿಂದ ಕೆರೆಯ ನೀರು ಬತ್ತುತ್ತ ಹೋಯಿತು. ಆರು ವರುಷಗಳು ಜಾರಿದವು. ಕೆರೆ ನೀರಿನಿಂದ ತುಂಬುವ ದರ ಬದಲು ಮಣ್ಣಿನಿಂದ ಹುಗಿಯಹತ್ತಿತು. ಅಲ್ಲಿಯ ಜನರು ಡಂಬಳ ರಾಜ್ಯದ ಪುಣ್ಯದ ಸೊಡರು ಬತ್ತಿತೆಂದು ಭಾವಿಸಿದರು. ಅಲ್ಲಲ್ಲಿ ಬರಗಾಲದ ಭೀಕರತೆಯು ಬೆಳೆಯುತ್ತ ಹೊರಟಿತು. ದವಸ ಧಾನ್ಯಗಳು ಕಡಿಮೆಯಾಗ ಹತ್ತಿದವು. ಮಳೆ ಬಂದರೆ ಕೆರೆಯಲ್ಲಿ ನೀರೇ ನಿಲ್ಲದಾಯಿತು. ಅದರ ಪುನ ರ್ರಚನೆಯ ಅವಶ್ಯಕತೆಯಿತ್ತು. ಕೆರೆ ಬಹು ದೊಡ್ಡದಿದ್ದ ಮೂಲಕ ಅದರ ಪುನರುಜ್ಜೀವನಕ್ಕಾಗಿ ಅಪಾರ ಹಣವು ಬೇಕಿತ್ತು. ಮೊದಲೇ ದರಿದ್ರರಾಗಿದ್ದ ಡಂಬಳ ಜನಕ್ಕೆ ಹಣವೆಲ್ಲಿಂದ ಬರಬೇಕು ? ಡಂಬಳದ ಜನರೆಲ್ಲರೂ ಬಂದು ದೊಡ್ಡಬಸಪ್ಪನನ್ನು ಬೇಡಿಕೊಂಡರು. ಶಿಲೆ ಕರಗಬಹುದು, ದೊಡ್ಡಬಸಪ್ಪನ ಮನಸ್ಸು ಕರಗುವಂತಿಲ್ಲ. ತನ್ನಲ್ಲಿ ವಿಷ ಪ್ರಾಶನಕ್ಕಾಗಿ ಕೂಡ ಕಾಸಿಲ್ಲವೆಂದು ಹೇಳಿದನು. ಮನೆಯ ತುಂಬಾ ಕಾಳಿನ ಚೀಲಗಳು ಒಟ್ಟಿದ್ದವು ಆದರೆ ಜನರು ಮಾತಾಡುವಂತಿರಲಿಲ್ಲ.

ಮಲ್ಲವ್ವನಿಗೆ ಬಯಕೆಯಾಗಲು ಪ್ರಾರಂಭವಾಯಿತು. ಅವಳು ಉಣ್ಣುವ ದನ್ನೇ ಬಿಡಹತ್ತಿದಳು. ದೊಡ್ಡಬಸಪ್ಪನಿಗೆ ತಿಳಿಯದಾಯಿತು. ನಂತರ ಅವ ನಿಗೆ ಲಕ್ಷಣಗಳು ತಿಳಿದು ಮನಸ್ಸಿನಲ್ಲಿ ಸಂತೋಷಪಟ್ಟನು. ಮಲ್ಲವ್ವನು

ಗಂಡು ಮಗುವನ್ನು ಹೆತ್ತಳು. ಆ ವರುಷ ಡಂಬಳಕ್ಕೆ ಮಳೆ ಬಂದಿತು. ಆ ವರುಷ ದೇವರು ಕಣ್ಣು ತೆರೆದನೆಂದು ಜನರು ತಿಳಿದರು. ಮಲ್ಲವ್ವನಿಂದ ಹೋದ ಮಳೆ ಮಲ್ಲವ್ವನ ಮಗ ರಾಯಪ್ಪನಿಂದ ಬಂದಿತೆಂದು ಜನರಂದರು. ರಾಯಪ್ಪನು ಹುಟ್ಟುತ್ತಲೇ ಮಳೆಯನ್ನು ತಂದುದಕ್ಕೆ ಅವನೊಬ್ಬ ವಿಭೂತಿ ಪುರುಷನಾಗಲೇ ಬೇಕೆಂದು ಊರಿನ ಹಿರಿಯನಾದ ಮುತ್ತಯ್ಯನು ಜನಕ್ಕೆ ಹೇಳಿದನು.

ಮಲ್ಲವ್ವನ ಕಿವಿಗೆ, ಅವಳಿಂದ ಮಳೆ ಹೋಯಿತೆಂಬ ಶಬ್ದವು ಬಿದ್ದಿತು. ಅದಕ್ಕೆ ವಿಷಾದಪಟ್ಟಳು. ನಿಜವಾಗಿಯೂ ಮಲ್ಲವ್ವನು ದೊಡ್ಡ ಮನಸ್ಸಿನವಳು. ದೊಡ್ಡ ಬಸಪ್ಪನಿಗೆ ಕೆರೆಯನ್ನು ಜೀರ್ಣೋದ್ಧಾರಗೊಳಿಸಲಿಕ್ಕೆ ಹಣವನ್ನು ಕೊಡಲಿಕ್ಕೆ ಪರಿಪರಿಯಾಗಿ ಮಲ್ಲವ್ವನು ಬೇಡಿಕೊಂಡಳು. ಆದರೆ ಎಲ್ಲವೂ ವ್ಯರ್ಥ ! ಯಾರಿಗೂ ಒಂದು ಕಾಸನ್ನೂ ಕೊಡದ ಜಿಪುಣನವನು. ರಾಯಪ್ಪನು ಹುಟ್ಟಿದಾಗ ಜನರು ಸಕ್ಕರೆಯನ್ನು ಕೇಳಿದರೆ "ಕರುಳಿಗೆ ಕಾಟ ಸಿಗದಾಗ ಕೊರಳಿಗೆ ಬುಕ್ಕಿಟ್ಟಂತೆ" ಎಂದು ಹೇಳಿ ಹೆದರಿಸಿದನು. ಅವನ ಹುಟ್ಟಿನಿಂದಲೇ ಮಳೆಯನ್ನು ಕಂಡು ಜನಕ್ಕೆ ರಾಯಪ್ಪನ ವಿಷಯಕ್ಕೆ ಒಂದು ರೀತಿಯ ಆದರಾಭಿಮಾನವು ಬೆಳೆಯುತ್ತ ಹೋಯಿತು. ಮಳೆ ಬಂದರೂ ನೀರು ನಿಲ್ಲಲಾರದಷ್ಟು ಕೆರೆಯು ಹುಗಿದು ಹೋಗಿದೆ. ಅದರ ಪುನರ್ರಚನೆಯ ಚಿಂತೆಯೇ ಜನಕ್ಕೆ ತೊಂದರೆಯನ್ನೀಯಹತ್ತಿತು. ಅದು ಕೇವಲ ದೊಡ್ಡ ಬಸಪ್ಪನಂಥ ಸಿರಿವಂತರಿಗಷ್ಟೇ ಸಾಧ್ಯವಿತ್ತು. ಡಂಬಳದಲ್ಲಿ ಅವನೊಬ್ಬನೇ ಶ್ರೀಮಂತ ವ್ಯಕ್ತಿ. ಆದರೆ ಅವನಿಂದ ದುಡ್ಡನ್ನು ಉಚ್ಚಿಸುವದೆಂದರೆ, ಅವನನ್ನು ಬಿಟ್ಟು ಮಾಡುವ ಕಾರ್ಯದ ಅಸಾಧ್ಯತೆಯಷ್ಟೇ ಅಸಾಧ್ಯವಿತ್ತು. ಮಲ್ಲವ್ವನ ಕಾಲ್ಗುಣದಿಂದ ಕೆರೆಯ ನೀರು ಹೋಯಿತೆಂದು ಆಡುವ ಜನರ ಮಾತು ದೊಡ್ಡಬಸಪ್ಪನ ಕಿವಿಯ ವರೆಗೂ ಹೋಯಿತು. ಅವನಿಗೂ ನಿಜವೆನಿಸಿತು.

ಒಮ್ಮೆ ಮಲ್ಲವ್ವನು ಕೆರೆಯನ್ನು ಕಟ್ಟಿಸಲು ಧನ ಸಹಾಯ ಮಾಡಿರೆಂದು ಕೇಳಿದಾಗ ದೊಡ್ಡಬಸಪ್ಪನು "ನೀನು ನನ್ನ ಹೊಸ್ತಿಲದಲ್ಲಿ ಕಾಲಿಟ್ಟಾಗಲೇ ಕೆರೆಯ ನೀರು ಬತ್ತಿ ಹೋಯಿತು. ಅದಕ್ಕೆ ನನ್ನ ಧನವನ್ನು ವ್ಯಯಿಸಿ ನನ್ನನ್ನು ಬತ್ತಿಸಬೇಕೆಂದು ವಿಚಾರವಿದೆಯೇ ?" ಎಂದು ಕೇಳಿದನು.

ಮಲ್ಲವ್ವನಿಗೆ ಅತ್ಯಂತ ದುಃಖವೆನಿಸಿತು. ಜನರಾಡುವ ಮಾತನ್ನು ಅವಳು ಮನಸ್ಸಿಗೆ ಹಚ್ಚಿಕೊಂಡಿದ್ದಿಲ್ಲ. ಆದರೆ ದೊಡ್ಡಬಸಪ್ಪನು ಮಾತನಾಡಿದ್ದಕ್ಕೆ ಅವಳಿಗೆ ವಿಷಾದವೆನಿಸಿತು. ತನ್ನಿಂದ ಹೇಗಾದರೂ ಆ ಕೆರೆಯ ಪುನರುಜ್ಜೀವನವು ಆಗಲೇಬೇಕೆಂದು ವಿಚಾರಿಸಿದಳು. ಆದರೆ ಬೊಕ್ಕಸದ ಕೀಲಿಕೈ ದೊಡ್ಡಬಸಪ್ಪನ ಹಿಡಿತದಲ್ಲಿ. ಜೀವನದಲ್ಲಿ ದಿನದಿನಕ್ಕೂ ಅವಳಿಗೆ ಬೇಸರಿಕೆ ಎನಿಸತೊಡಗಿತು. ಹದಿನಾರು ವರುಷ ಪ್ರಾಯದ ರಾಯಪ್ಪನ ಮದುವೆಯನ್ನು ಮಾಡದೆ ಸಾಯುವದೆಂದರೆ ಮನಸ್ಸಿಗೆ ಅಸಮಾಧಾನವೆನಿಸಿತು. ಆದರೆ ಜನರ ನಿಂದಾಸ್ಪದ ಬಾಣಗಳ ಎಳೆತವು ಮಗನ ಮದುವೆಯ ಮಮತೆಯನ್ನು ಗೆದ್ದಿತು. ತಾನು ಭೂಮಿಯಲ್ಲಿ ಜನಿಸಿ ಬಾಳುವದರಲ್ಲಿ ಯಾವ ಸಾರ್ಥಕತೆಯೂ ಇಲ್ಲವೆಂದು ಬಗೆದಳು. ತನ್ನ ತಾಯಿಯಿತ್ತ ಉಂಗುರವನ್ನು ತೆಗೆದು ಒಂದು ದಿವಸ ಮಗನ ಕೈಯಲ್ಲಿ ಕೊಟ್ಟಳು.

"ರಾಯಪ್ಪಾ, ನಿನ್ನನ್ನು ಹಡೆಯುವದಕ್ಕಾಗಿ ಭೂಮಿಗೆ ಹುಟ್ಟಿಬಂದಂತಾಗಿದೆ. ನೀನು ನನ್ನ ಹೊಟ್ಟೆಯ ಮಗುವಾಗಿದ್ದರೆ ಈ ಕೆರೆಯನ್ನು ಪುನರುಜ್ಜೀವನಗೊಳಿಸಲು ದೇಹದಲ್ಲಿ ಹನಿ ರಕ್ತವಿರುವ ವರೆಗೂ ದುಡಿ. ನಿನ್ನ ತಂದೆಯನ್ನು ಕೇಳು. ಅವನು ಒಂದು ಕಾಸು ಕೊಡದ ಜಿಪುಣ! ಅವನಿಂದ ಹಣವು ದೊರೆಯಲಾರದೆಂಬ ಮಾತು ಸಿದ್ಧವಾದ ಮೇಲೆ ಈ ಉಂಗುರವನ್ನುಚ್ಚಿ ಅದರಲ್ಲಿದ್ದ ಚೀಟಿಯನ್ನು ಓದು. ಅದರಂತೆ ನಡೆ. ಆದರೆ ಅಲ್ಲಿಯವರೆಗೆ ಆ ಚೀಟಿಯನ್ನು ಉಚ್ಚಿ ಓದಿದರೆ ನನ್ನ ತಾಯಿಯು ಭೂತವಾಗಿ ಬಂದು ನಿನ್ನನ್ನು ತೊಂದರೆಗೊಳಿಸುತ್ತಾಳೆ. ಆ ಉಂಗುರವನ್ನು ಕೈಯಲ್ಲಿ ಮಾತ್ರ ಇಟ್ಟುಕೊಳ್ಳಬೇಡ. ಇಟ್ಟುಕೊಂಡವರ ಮರಣವು ಖಂಡಿತ. ನಾನು ಅದನ್ನು ಇಂದು ಇಟ್ಟುಕೊಂಡಿದ್ದರಿಂದ ನಾಳೆ ಮುಂಜಾವಿನಲ್ಲಿ ನನ್ನ ಯಾತ್ರೆಯು ಕೊನೆಗೊಳ್ಳುವದು" ಎಂದು ಹೇಳಿದಳು.

ಅವಳ ಕಾರ್ಯಸಿದ್ಧಿಗಾಗಿ ರಾಯಪ್ಪನು ತನ್ನ ಜೀವನವನ್ನೇ ಮುಡಿಪಾಗಿಡಲು ತಾಯಿಗೆ ವಚನವಿತ್ತನು. ತಾಯಿಯನ್ನು ಕಳೆದುಕೊಳ್ಳುವದು ಅವನಿಗೆ ತನ್ನನ್ನು ಕಳೆದುಕೊಂಡಷ್ಟೇ ದುಃಖವೆನಿಸಿತು. ಈ ಮಾತನ್ನಾಡುವಾಗಲೆ ಮಲ್ಲವ್ವ ಉಂಗುರವನ್ನರೆದು ಕುಡಿದು ಬಿಟ್ಟಿದ್ದಳು. ಅದನ್ನು ತಿರುಗಿಸಿಕೊಳ್ಳುವದು ಯಾರಿಗೂ ಸಾಧ್ಯವಿದ್ದಿದ್ದಿಲ್ಲ.

ಅಂತೂ ಮರುದಿವಸ ಮಲ್ಲವ್ವನ ಮೂರು ದಿನದ ಜಾತ್ರೆಯು ಕೊನೆಗೊಂಡಿತು. ದೊಡ್ಡಬಸಪ್ಪನಲ್ಲಿ ಮಾತ್ರ ಯಾವ ರೀತಿಯ ಅಂತರವೂ ಕಂಡು ಬರಲಿಲ್ಲ. ಇತ್ತೀಚೆಗೆ ತಾನೇ ಅಡಿಗೆ ಮಾಡಿ ರಾಯಪ್ಪನಿಗೆ ಬಡಿಸುತ್ತಾನೆ. ಪರದೇಶಿಯಾದ ರಾಯಪ್ಪನು ಒಂದು ದಿನ ಉಂಡರೆ ಒಂದು ದಿನ ಉಪವಾಸ ಬೀಳುತ್ತಾನೆ. ಹಗಲಿರುಳೂ ತಾಯಿಗೆ ವಚನವಿತ್ತ ಕಾರ್ಯದ ವಿಚಾರ ಮುಂಬರುತ್ತಿತ್ತು. ದೇವರಂತಹ ತಾಯಿಗೆ ದೊಡ್ಡಬಸಪ್ಪನು ಕೊಟ್ಟ ತೊಂದರೆಯನ್ನು ನೋಡಿ ರಾಯಪ್ಪನಿಗೂ ಜೀವನವು ಬೇಸರವೆನಿಸಿತು.

ರಾಯಪ್ಪನು ಪ್ರಾಯಕ್ಕೆ ಬಂದರೂ ಬೀದಿಯ ಶ್ವಾನಕ್ಕಿದ್ದ ಸ್ವಾತಂತ್ರ್ಯವು ದೊರೆಯದಾಯಿತು. ಅವನು ದೊಡ್ಡವನಾದನೆಂದು ಜನರು ಅವನೆದುರಿಗೆ ಕೆರೆಯ ವಿಷಯವನ್ನು ಪ್ರಸ್ತಾಪಿಸಹತ್ತಿದರು. ಆದರೆ ಅವನ ಅಂತರಂಗದ ಹೋರಾಟವು ಯಾರಿಗೂ ತಿಳಿಯಲಿಲ್ಲ ಅದಕ್ಕಾಗಿಯೇ ತಾಯಿಯೊಬ್ಬಳು ಪ್ರಾಣವಿತ್ತಳು. ತಂದೆಗೆ ಇದರ ವಿಷಯವನ್ನು ರಾಯಪ್ಪನು ಮಾರ್ಮಿಕವಾಗಿಯೂ ನೇರವಾಗಿಯೂ ಕೇಳಿ ನೋಡಿದನು. ತಾಯಿಯ ವಚನವನ್ನು ಪೂರ್ತಿಗೊಳಿಸುವದು ಸಾಧ್ಯವಿಲ್ಲವೆಂದು ಬಗೆದನು. ತಾಯಿಯು ಅಂತಿಮ ಚಣದಲ್ಲಿ ಹೇಳಿದ ಮಾತು ಮನಕ್ಕೆ ತಾಕಿತು. ಅವಳ ಉಂಗುರವನ್ನು ಉಚ್ಚಿ ಅದರಲ್ಲಿದ್ದ ಕಾಗದವನ್ನು ಓದಿದನು. ಪುನಃ ಪುನಃ ಓದಿಕೊಂಡನು. ಅದರ ಅರ್ಥವೇ ಆಗಲಿಲ್ಲ. ಅದರಲ್ಲಿ ಇಷ್ಟೇ ಬರೆದಿತ್ತು: "ಹನಿ ರಕ್ತ; ಹಿಡಿ ಹೊನ್ನು! ಗೃಹಲಕ್ಷ್ಮಿ, ರಾಜ್ಯ ರಕ್ತದ ಬೊಂಬೆ! ಎನ್ನವನತಿಯೇ ಎನ್ನ ಗೃಹದುನ್ನತಿ ! ಹನಿ ರಕ್ತ ಪಾಪಕ್ಕೆ ಹಿಡಿ ಹೊನ್ನು ದಾನವಿತ್ತರೆ ಅಳಕಿಪುದು ಪಿತೃಪಾತಕವು !! ಹಿಡಿ ಹೊನ್ನ ಕೊಡದೊಡೆ ಹನಿ ರಕ್ತ ಸುರಿಸು !! ಕುಲತಿಲಕ ಕುಂಕುಮದಳಿವೆ ರಾಜ್ಯದುಳಿವು !!! "

ತಾಯಿಯ ಒಕ್ಕಣಿಕೆಯು ರಾಯಪ್ಪನಿಗೆ ಒಡೆಯಲಾರದ ಒಗಟವಾಯಿತು. ಅವಳಾಸೆಗಾಗಿ ರಾಯಪ್ಪನು ಬಾಳಿದನು. ಆದರೆ ತಂದೆಯ ರೀತಿ ನೀತಿಗಳಲ್ಲಿ ತಿಲಮಾತ್ರವಾದರೂ ಅಂತರವಾಗಲಿಲ್ಲ. ತನಗೇನೂ ತಿಳಿಯದೆಂದು ನೇರವಾಗಿ ಮುತ್ತಯ್ಯನ ಬಳಿ ಹೋದನು. ಮಾತಿನ ಭರದಲ್ಲಿ ಉಂಗುರವನ್ನಿಟ್ಟುಕೊಂಡೇ ಹೋದನು. ತಾಯಿಯ ಮಾತು ಸ್ಮೃತಿಗೆ ಬರ

ಲಿಲ್ಲ. ತಾಯಿಯ ಒಕ್ಕಣಿಕೆಯ ವಿಚಾರವು ಮೇಲಿಂದ ಮೇಲೆ ತೊಂದರೆಯ ನ್ನೀಯಲು ಪ್ರಾರಂಭಿಸಿತು. ಮುತ್ತಯ್ಯನು ಯಾವ ಕಾರ್ಯವಿಲ್ಲದೆ ಶತಪಥ ವನ್ನಾಡುತ್ತಾ ವಿಚಾರದಲ್ಲಿ ಮಗ್ನನಾಗಿದ್ದನು. ರಾಯಪ್ಪನು ಬಂದಕೂಡಲೇ ಆದರದಿಂದ ಸ್ವಾಗತಿಸಿ ಬಂದ ವಿಚಾರವನ್ನು ಕೇಳಿದನು. ರಾಯಪ್ಪನು ಸಾದ್ಯಂತವಾಗಿ ತಾಯಿಯ ಮರಣ ಮುನ್ನದ ವಚನದಿಂದ ಇಂದಿನ ವರೆಗೂ ಆದ ಕಥೆಯನ್ನು ಹೇಳಿದನು.

ಮುತ್ತಯ್ಯನಿಗೆ ಮಲ್ಲವ್ವನ ಒಕ್ಕಣಿಕೆಯ ಅರ್ಥವಾಯಿತು. ದೊಡ್ಡ ಬಸಪ್ಪನ ಮನೆತನದ ಆಧಾರಸ್ತಂಭನಾದ ರಾಯಪ್ಪನು ಕೆರೆಗೆ ಆಹುತಿಯನ್ನಿತ್ತರೆ ದೊಡ್ಡಬಸಪ್ಪನು ಅನಾಯಾಸವಾಗಿ ತನ್ನ ಸಂಪತ್ತನ್ನು ಇದಕ್ಕಾಗಿ ವ್ಯಯಿಸುವನು. ಅಂದರೆ ಮಲ್ಲವ್ವನ ಮೇಲಿನ ಮಾತು ಹೋದಂತಾಯಿತೆಂದು ಅವಳ ಒಕ್ಕಣಿಕೆಯ ಮಥಿತಾರ್ಥ. ಆದರೆ ಇಂತಹ ಹಸುಳೆಯನ್ನು ಅಂತಹ ಆತ್ಮಹತ್ಯೆಯ ಅವಕಾಶಕ್ಕೆ ಎಡೆಗೊಡಬಾರದೆಂದು ಮುತ್ತಯ್ಯನು ಬಗೆದನು. ಆದರೆ ತಮ್ಮ ತಂದೆಯ ಸಂಪತ್ತಿನ ಹಿನ್ನೆಲೆಯನ್ನು ಕೇಳಬೇಕೆಂಬ ಕುತೂಹಲ ವಿದ್ದುದರಿಂದ ರಾಯಪ್ಪನು ಮುತ್ತಯ್ಯನಿಗೆ ಹೇಳಲು ಒತ್ತಾಯಪಡಿಸಿದನು. ಮುತ್ತಯ್ಯನು ಪ್ರಾರಂಭಿಸಿದನು.

" ರಾಯಪ್ಪ, ಪುಲಿಕೇಶಿಯ ರಾಜ್ಯವೆಂದರೆ ಪುಣ್ಯದ ರಾಜ್ಯ ! ಆದರೆ ಯಾವುದೋ ಒಂದು ಅರಿಯದ ಪಾಪವು ನಮ್ಮನ್ನೆಲ್ಲಾ ಸುತ್ತಿಕೊಂಡು ಪೀಡಿಸ ಹತ್ತಿದೆ. ನಮ್ಮೂರ ಕೆರೆ ಬತ್ತಿದ್ದನ್ನು ನಾನು ಎರಡನೇ ಸಲ ಕಂಡಿದ್ದೇನೆ. ನಾನು ಪ್ರಾಯಕ್ಕೆ ಬಂದಾಗ ಈ ಕೆರೆಯ ನೀರು ಬತ್ತಿದ್ದಿತು. ಮೇಘರಾಜನೂ ನಮ್ಮ ಮೇಲೆ ಮುನಿದುಕೊಂಡನು. ರಾಜ್ಯದಲ್ಲಿ ಬರಗಾಲದ ಚಿಹ್ನಗಳು ಕಾಣಿಸತೊಡಗಿದವು; ನೀರು ಹೋಗಿದ್ದರಿಂದ ಅದನ್ನು ಅಗೆಯಿಸಿ ದೊಡ್ಡದ ನ್ನಾಗಿ ಮಾಡಬೇಕೆಂದು ವಿಚಾರಿಸಿದರು. ಅಂದು ಅರೆಹಿಡಿ ಹಿಟ್ಟನ್ನು ಕೊಟ್ಟರೆ ನೇಸರು ಮೂಡಿ ಮುಳುಗುವ ವರೆಗೂ ಬೆನ್ನೆಲಬು ಬಾಗುವಂತೆ ಜನರು ದುಡಿ ಯುತ್ತಿದ್ದರು. ಒಂದೊಂದು ಜೋಳದ ಕಾಳು ಒಂದೊಂದು ಮುತ್ತಿದ್ದಂತೆ. ಹೊಟ್ಟೆಗೆ ಬಂಗಾರದ ಮೊಹರುಗಳನ್ನು ಕಟ್ಟಿಕೊಂಡು ಜನರು ಸಾಯುತ್ತಿದ್ದರು. ಆದರೆ ಕಾಳುಗಳು ದೊರೆಯುತ್ತಿದ್ದಿಲ್ಲ.

ದೊರೆಯು ಮನಸ್ಸು ಮಾಡಿದರೆ ಏನು ತಾನೆ ಅಸಾಧ್ಯ? ಅಂದಿನಿಂದಲೂ ಹಿಡಿತದಲ್ಲಿ ಪ್ರಸಿದ್ಧಿಯನ್ನು ಪಡೆದ ನಿಮ್ಮ ತಂದೆಯೇ ಇಂತಹ ಕಾರ್ಯಕ್ಕೆ ಯೋಗ್ಯನೆಂದು ದೊರೆಯು ಕೆರೆಯ ಪುನರ್ರಚನೆಗಾಗಿ ಒಂದು ನೂರು ಖಂಡಿ ಜೋಳವನ್ನು ಕೊಟ್ಟು ಕಳಿಸಿದನು. ಜೋಳಕ್ಕಾಗಿ ಜನರು ಹಗಲಿರುಳು ಬೆವರು ಸುರಿಸುತ್ತಿದ್ದರು. ದುಡಿದರೆ ಕಾಳು! ಕಾಳಿದ್ದರೆ ಕೂಳು!! ಕೂಳಿರದಿದ್ದರೆ ಗೋಳು!!! ಸರಿ. ಕಾರ್ಯವು ಪೂರ್ತಿ ಮುಗಿಯಲು ಬಂದಂತೆ ಕಾಳನ್ನು ಕೊಡುವದು ನಿಮ್ಮ ತಂದೆ ಕಡಿಮೆ ಮಾಡಿದರು. ಒಂದು ವಾರ ಪೂರ್ತಿಯಾಗಿ ದುಡಿಯಿಸಿಕೊಂಡು ಕೊನೆಯ ದಿವಸ ಕಾಳಿಲ್ಲವೆಂದು ಕೈಯೆತ್ತಿಬಿಟ್ಟನು. ಇದ್ದ ಕಾಳನ್ನು ನೆಲಮನೆಯಲ್ಲಿ ಅಡಗಿಸಿಬಿಟ್ಟನು. ಸಾವಿರಾರು ಕೂಲಿಯಾಳುಗಳು ನಿಮ್ಮ ಮನೆಯಲ್ಲಿಯೇ ಕುಳಿತರು. ದೊಡ್ಡಬಸಪ್ಪನು ಅವರೆದುರಿಗೆ ಮೂರು ದಿವಸಗಳ ವರೆಗೆ ಉಪವಾಸ ಕುಳಿತನು. ಅಂದಿನಿಂದಲೇ ಆ ಚಟವನ್ನು ಕೆಡವಿಕೊಂಡಿದ್ದಾನೆ. ಜನರು ತಮ್ಮ ಮನೆಯಲ್ಲಿದ್ದ ಬಂಗಾರದ ವಸ್ತುಗಳನ್ನು ಇವನ ಮುಂದಿಟ್ಟು ಕಾಳಿಗಾಗಿ ಪ್ರಾರ್ಥಿಸಿದರು. ಹಸಿವೆಯನ್ನು ತಡೆಯಲಾರದೆ ಅನೇಕರು ಸತ್ತರು. ಅವರ ಬಂಗಾರವೆಲ್ಲಾ ಬಂದಿತು. ನಂತರ ಬಚ್ಚಿಟ್ಟ ಕಾಳನ್ನು ಮಾರಿ ಧನವನ್ನು ದೊರಕಿಸಿದನು. ಅಂತಲೆ ನಿಮ್ಮ ತಂದೆಯ ಹಿಡಿ ಹೊನ್ನೆಂದರೆ ದರಿದ್ರರ ಹಸಿರಕ್ತವಿದ್ದಂತೆ. ಅದೇ ಕೆರೆಯಿಂದ ಸಂಪಾದಿಸಿದ ಹಣವನ್ನು ಅದೇ ಕೆರೆಗೆ ವ್ಯಯಿಸಬೇಕೆಂದು ನಿಮ್ಮ ತಾಯಿಯ ಆಶೆ. ತಾನಿದ್ದರೆ ಅದಾಗದೆಂದು ಅವಳು ಭಾವಿಸಿ ದೇಹವನ್ನು ತ್ಯಜಿಸಿದಳು. ಕೆರೆಯ ರಕ್ತವು ಮನೆಯಲ್ಲಿ ಬಿದ್ದುದರಿಂದ ಮನೆಯ ರಕ್ತವು ಕೆರೆಯಲ್ಲಿ ಬಿದ್ದರೆ ಸಾರ್ಥಕತೆಯಿದೆ ಎಂದು ಅವಳಾಶೆಯಿತ್ತು. ಎಲ್ಲವೂ ನಿನ್ನ ಇಷ್ಟ! ದೇವರು ನಿನ್ನನ್ನು ಕಾಪಾಡಲಿ" ಎಂದಿಷ್ಟು ಹೇಳಿ ಸುಮ್ಮನಾದನು.

ಅದರರ್ಥವು ರಾಯಪ್ಪನಿಗೆ ಆಗಬಾರದೆಂದು ಅವನ ಮತವಿತ್ತು. ಆದರೆ ರಾಯಪ್ಪನೂ ಏನೂ ತಿಳಿಯದವರಂತೆ ವರ್ತಿಸಿ ಅಲ್ಲಿಂದ ಎದ್ದು ಬಂದನು. ರಾಯಪ್ಪನು ತನ್ನ ಭಾವೀ ಮಾರ್ಗವನ್ನು ಮನಸ್ಸಿನಲ್ಲಿ ಆಗಲೇ ಕಲ್ಪಿಸಿಕೊಂಡೇ ಬಿಟ್ಟನು. ನೇರವಾಗಿ ಮನೆಗೆ ಹೋದನು. ತಾಯಿ ಬರೆದಿಟ್ಟ ಕಾಗದವನ್ನು ಚೀಟಿಯಲ್ಲಿಟ್ಟು ತಾನೊಂದು ಚೀಟಿಯನ್ನು ಬರೆದು ಅದರಲ್ಲಿ ಇಟ್ಟನು.

" ಅಪಾರ ಸಂಪತ್ತಿನಣುಗಸಿಗೆ ಸಂಪತ್ತಿನಾಶೆಯಿಲ್ಲ. ಕನಕದರಸನ ಅವಸಾನದ ನಂತರ ಕನಕವದು ನಾಡರಚನೆಗೆ ಮೀಸಲು, ನನ್ನ ಸ್ವತ್ತು ನಿಮ್ಮಾಪತ್ತಿನನ್ನ. "

ಎಂದು ಬರೆದು ತಾಯಿಯಿಟ್ಟಿದ್ದ ಉಂಗುರದಲ್ಲಿಯೇ ಇಟ್ಟನು. ಅದರಲ್ಲಿ ಯಾವದೋ ಒಂದು ಕಪ್ಪು ವರ್ಣದ ಪುಡಿಯಿತ್ತು. ಆದರೆ ಕೆರೆಗೆ ತನ್ನನ್ನೇ ಆಹುತಿಯನ್ನು ಕೊಡುವ ಭರದಲ್ಲಿ ಯಾವದರ ಬಗ್ಗೆಯೂ ಹೆಚ್ಚು ವಿಚಾರಿಸ ಲಿಲ್ಲ. ತಾಯಿಗೆ ಕೊಟ್ಟ ವಚನಕ್ಕಾಗಿ ಹಿಡಿಹೊನ್ನಿನ ಬದಲು ಹನಿರಕ್ತವನ್ನು ನೀಡಲು ನಿರ್ಧರಿಸಿಯೇ ಬಿಟ್ಟನು. ಬೆರಳಿನಲ್ಲಿಟ್ಟ ಉಂಗುರವನ್ನು ಆಕಸ್ಮಿಕ ವಾಗಿ ದೊಡ್ಡಬಸಪ್ಪನು ನೋಡಿದನು: " ರಾಯಪ್ಪ, ಅದು ವಜ್ರದುಂಗುರ. ಅದನ್ನು ಎಲ್ಲಿಯಾದರೂ ಕಳೆದರೆ ನನಗೆ ವ್ಯಸನವೆನಿಸುತ್ತದೆ. ನಿಮ್ಮ ತಾಯಿಯ ತವರುಮನೆಯ ಸ್ವತ್ತದು. ನಿಮ್ಮಮ್ಮನು ಸಾಯುವ ಕಾಲಕ್ಕೆ ಅದನ್ನು ಮಾರಿ ಬಂದ ಹಣದಿಂದ ಬಸಪ್ಪನ ಮೂರ್ತಿಯನ್ನು ಪ್ರತಿಸ್ಥಾಪಿಸಲು ನಿಮ್ಮ ತಾಯಿಗೆ ಹೇಳಿದ್ದಳಂತೆ. ನಿಮ್ಮ ತಾಯಿ ಹೇಳಿ ನನಗೆ ಒಂದು ಗುಡಿ ಕಟ್ಟಲು ಕೇಳಿದ್ದಳು. ಆದರೆ ಹಣವೆಲ್ಲಿದೆ? ತಾ ! ಅದನ್ನು ನನಗೆ ಕೊಟ್ಟು ಬಿಡು. "

ರಾಯಪ್ಪನು ಈ ಮಾತನ್ನು ಕೇಳಿ ಅದನ್ನು ದೊಡ್ಡಬಸಪ್ಪನಿಗೆ ಕೊಟ್ಟು ಬಿಟ್ಟನು. ಅವನು ಅದನ್ನು ಬಲಗೈಯಲ್ಲಿಟ್ಟುಕೊಂಡೇ ಹೋದನು. ತಾಯಿಯು ಹೇಳಿದ ಮಾತನ್ನು ಹೇಳಬೇಕೆಂದು ಬಯಸಿದನು. ಆದರೆ ಮುಂದಿನ ಸಂಕಲ್ಪ ಸಾಧನೆಯಲ್ಲಿ ಎಲ್ಲವೂ ಮರೆಯಾಯಿತು. ಅಂದು ರಾತ್ರಿ ಊಟ ಮಾಡಲು ಒಲ್ಲೆನೆಂದನು. ಉಳಿದುದನ್ನು ಅದೇಕೆ ಕೆಡಿಸಬೇಕೆಂದು ದೊಡ್ಡಬಸಪ್ಪನು ತಾನೇ ಹಾಕಿಕೊಂಡು ಉಂಡುಬಿಟ್ಟನು.

ಸಂಧ್ಯಾದೇವಿಯು ಮರೆಯಾಗಿ ರಾತ್ರಿಯು ಆಗಲೇ ಕಾಲಿಟ್ಟಿದ್ದಳು. ರಾಯಪ್ಪನ ಮನಸ್ಸಿನಲ್ಲಿ ವಿಚಾರಗಳ ಮೋಡಗಳೆದ್ದು ವಾತಾವರಣವನ್ನು ಪ್ರಕೋಪಗೊಳಿಸಿದ್ದವು. ಡಂಬಳದ ಜನರು ಗಾಢ ನಿದ್ರೆಯಲ್ಲಿ ಮುಳುಗಿದಾಗ ರಾಯಪ್ಪನು ಎದ್ದು ಆ ಕೆರೆಯ ಬಳಿ ಹೋದನು. ಅಲ್ಲಿದ್ದ ಒಂದು ಕಟ್ಟೆಗೆ

ಯಿಂದ ತನ್ನ ರುಮಾಲದ ಮೇಲೆ ತನ್ನದೇ ರಕ್ತದಿಂದ "ನನ್ನ ತಂದೆಯ ನಂತರ ನನ್ನ ಆಸ್ತಿ ರಾಜ್ಯದ ಸಾರ್ವಜನಿಕರ ಸೊತ್ತು; ತಾಯಿಯ ವಚನದಂತೆ ಹಿಡಿ ಹೊನ್ನನ್ನು ಕೊಡದೇ ಹನಿ ರಕ್ತ ಕೊಟ್ಟಿದ್ದೇನೆ." ಎಂದು ಬರೆದನು.

ರಾತ್ರಿಯು ಸರಿಯಿತು. ಸೂರ್ಯನು ಮೂಡಿದನು. ನಸುಕಿನಲ್ಲಿ ಎದ್ದು ಜನರು ಅದನ್ನು ನೋಡಿ ಭೀತಿಗೊಂಡರು. ರಾಯಪ್ಪನ ಆತ್ಮಹತ್ಯೆಯ ವಾರ್ತೆಯನ್ನು ದೊಡ್ಡಬಸಪ್ಪನಿಗೆ ತಿಳಿಸಲು ಬಂದರು. ಎಷ್ಟು ಬಾಗಿಲ ಬಡೆದರೂ ದೊಡ್ಡಬಸಪ್ಪನು ಬಾಗಿಲನ್ನೇ ತೆರೆಯಲಿಲ್ಲ. ಜನರೆಲ್ಲರೂ ಕೂಡಿ ಬಾಗಿಲ ಮುರಿದು ಒಳಹೊಕ್ಕರು.

ಆದರೆ ದೊಡ್ಡಬಸಪ್ಪನು ಅಲ್ಲಿಯೇ ಮಲಗಿ ಪ್ರಾಣ ಬಿಟ್ಟಿದ್ದಾನೆ. ಬಾಯಲ್ಲಿ ಕಪ್ಪು ರಸ ಉಳಿದಿತ್ತು. ಅದೇ ರೀತಿ ಉಂಗುರದಲ್ಲಿಯೂ ಕಪ್ಪು ಬಣ್ಣದ ಕಲೆಯಿತ್ತು. ಅದರಲ್ಲಿ ಏನಾದರೂ ವಿಷವಿದ್ದಿರಬಹುದೆಂದು ಜನರು ತರ್ಕಿಸಿದರು. ಆದರಿಂದಲೇ ದೊಡ್ಡಬಸಪ್ಪನ ಮರಣವಾಯಿತು. ಮಲ್ಲವ್ವನೂ ಆದರಿಂದಲೇ ತೀರಿದಳೆಂದು ಜನರಿಗೆ ತಿಳಿದಿತ್ತು. ಆದರೆ ರಾಯಪ್ಪನ ಕೊನೆಗೆ ಜನರು ವಿಷಾದಪಟ್ಟರು.

ರಾಯಪ್ಪನ ಆಶೆಯಂತೆ ಊರವರು ಕೂಡಿ ಕೆರೆಯನ್ನು ಕಟ್ಟಿಸಿದರು. ಇಷ್ಟು ಅಪಾರ ಸಂಪತ್ತಿನ ಸಂಗ್ರಹಕ್ಕೆ ದೊಡ್ಡಬಸಪ್ಪನೆ ಕಾರಣವೆಂದು ಒಂದು ವಿಶಾಲವಾದ ಗುಡಿಯನ್ನು ಕಟ್ಟಿಸಿದ್ದಾರೆ. ಆದರಲ್ಲಿ ಮಲ್ಲವ್ವನ ವಿಷದುಂಗುರವನ್ನು ಮಾರಿ ಬಂದ ಹಣದಿಂದ ಚಿಕ್ಕ ಮೂರ್ತಿಯನ್ನು ಕೂಡಿಸಿದ್ದಾರೆ. ದೊಡ್ಡಬಸಪ್ಪನ ಹಣದಿಂದ ಗುಡಿಯಾದರೆ ಮಲ್ಲವ್ವನ ಹಣದಿಂದ ಮೂರ್ತಿಯಾಯಿತು. ಅಂತಲೇ ಗುಡಿಯತಕ್ಕ ಮೂರ್ತಿಯು ಭವ್ಯವಿಲ್ಲ. "ಕುಲತಿಲಕ ಕುಂಕುಮದಳಿವೇ ರಾಜ್ಯದುಳಿವು" ಎಂಬ ಮಲ್ಲವ್ವನ ಮಾತು ನಿಜವೆನಿಸಿತು.

ದೊಡ್ಡಬಸಪ್ಪನು ವಿಷದಿಂದ ಸತ್ತನು. ರಾಯಪ್ಪನು ಆತ್ಮಹತ್ಯೆಯಿಂದ ತೀರಿದನು. ಅಂತೂ ಇಬ್ಬರ ಪ್ರಾಣಗಳು ಹೋದುದರಿಂದಲೇ

ಡಂಬಳದ ಕೆರೆಯು ಉದ್ಧಾರವಾಗಿ ಜನರಿಗೆ ಅದರ ಲಾಭವು ದೊರೆಯ ಹತ್ತಿತು.

ಹೀಗಾಗಿ ಜಾತ್ರೆಯ ದಿನ ಇಷ್ಟೆಲ್ಲ ಲೋಕಕಲ್ಯಾಣ ಕಾರ್ಯಕ್ಕಾಗಿ ಕಾರಣವಾದ ಆ ವಜ್ರದುಂಗುರವು ಪುಣ್ಯವಂತರಿಗಷ್ಟೇ ಕಾಣುವದೆಂಬ ಪ್ರತೀತಿಯಿದೆ. ಜನರೂ ತಮ್ಮ ಇಷ್ಟಸಿದ್ಧಿಗಾಗಿ ಮಲ್ಲವ್ವನನ್ನು ಬೇಡಿ ಕೊಳ್ಳುತ್ತಾರೆ. ಮಲ್ಲವ್ವನೆಂದರೆ ಆ ಜನರ ಭಾಗ್ಯದ ದೇವತೆಯು!

# ಮಹಾಲಿಂಗ

ಶಿರಹಟ್ಟಿಯಿಂದ ಪಶ್ಚಿಮಕ್ಕೆ ಒಂಬತ್ತು ಮೈಲುಗಳಂತರದಲ್ಲಿ ಒಂದು ವಿಶಾಲಶ್ರೇಣಿಯ ಬೆಟ್ಟವಿದೆ. ಆ ವಿಶಾಲ ಹಾಗು ಉನ್ನತವಾದ ಬೆಟ್ಟದ ತುದಿಯಲ್ಲಿ ಒಂದು ಪುರಾತನವಾದ ಮಹಾಲಿಂಗನ ಭವ್ಯ ದೇಗುಲವಿದೆ. ಆ ದೇಗುಲದಿಂದಲೇ ಬೆಟ್ಟಕ್ಕೆ ಮಹಾಲಿಂಗನ ಬೆಟ್ಟವೆಂದು ಕರೆಯುತ್ತಾರೆ. ಸಹ ಸ್ರಾರು ಜನರು ಏಕಕಾಲಕ್ಕೆ ದೇಗುಲದಲ್ಲಿ ಸೇರುವಷ್ಟು ವಿಶಾಲವಾದ ಮಂದಿರವನ್ನು ನಿರ್ಮಿಸಿದ್ದಾರೆ. ಅಂತಹ ಭವ್ಯ ದೇಗುಲದಲ್ಲಿ ತೀರ ಚಿಕ್ಕ ದಾದ ಒಂದೇ ಶಿಲೆಯಲ್ಲಿ ಕಟೆದ ಗರ್ಭಗುಡಿಯಿದೆ. ದೇಗುಲವು ಮಾತ್ರ ಬಹು ಸುಂದರವಿದೆ. ಶಿಲೆಯು ಮೇಣದಂತಿದ್ದಿತೋ ಎಂಬಂತೆ ಶಿಲ್ಪಿಗಳು ಕಲಾಕುಸುರಿಯನ್ನು ಸೂರೆ ಮಾಡಿದ್ದಾರೆ. ಇಂತಹ ಕಲಾಪೂರ್ಣ ದೇಗುಲ ದಲ್ಲಿ ಇಂತಹ ಚಿಕ್ಕ ಹಾಗೂ ತೀರ ಸಾಮಾನ್ಯ ಗರ್ಭಗುಡಿಯನ್ನೇಕೆ ಕಟ್ಟಿದ ರೆಂದು ನೋಡಿದವರು ಆಶ್ಚರ್ಯಪಡುತ್ತಾರೆ.

ಈ ದೇಗುಲದಲ್ಲಿ ಸ್ತ್ರೀಯರೇ ಪ್ರವೇಶಿಸುವಂತಿಲ್ಲ. ಬೆಟ್ಟದ ಅಡಿಯ ಲ್ಲಿಯೂ ಒಂದು ಮಹಾಲಿಂಗನ ದೇಗುಲವಿದೆ. ಆ ಎರಡೂ ದೇಗುಲಗಳಲ್ಲಿ ಇನ್ನೊಂದು ವೈಚಿತ್ರ್ಯವಿದೆ. ಬೆಟ್ಟದ ತುದಿಯ ದೇಗುಲದಲ್ಲಿ ಶಿವನ ದೇಹ ವಿಷ್ಟೇ ಪ್ರತಿಷ್ಠಾಪಿಸಲ್ಪಟ್ಟಿದೆ. ಆ ಮೂರ್ತಿಗೆ ಹಸ್ತಪಾದಗಳೇ ಇಲ್ಲ. ನೀವು ಯಾರಾದರೂ, ಯವನರು ಆ ಮೂರ್ತಿಯನ್ನು ಭಗ್ನಗೊಳಿಸಿರಬೇಕೆಂದು ಸಂಶಯ ತೆಗೆದುಕೊಳ್ಳಬಹುದು. ಆದರೆ ಅದು ಹಾಗಲ್ಲ. ಬೆಟ್ಟದಡಿಯ ಲ್ಲಿದ್ದ ದೇಗುಲದ ಗರ್ಭಗುಡಿಯಲ್ಲಿ ಕೇವಲ ಶಿವನ ಪಾದಹಸ್ತಗಳು ಇರುತ್ತವೆ. ಕೆಳಗಿನ ದೇಗುಲದ ಪಾದಹಸ್ತಗಳು ಮೇಲಿನ ಮಹಾಲಿಂಗನ ದೇಗುಲದುವುಗ

ಕೆಂದು ಅಲ್ಲಿಯ ಜನರು ಹೇಳುತ್ತಾರೆ. ಪ್ರತಿವರುಷವೂ ಜಾತ್ರೆಯ ಕಾಲಕ್ಕೆ ಬೆಟ್ಟದ ಮೇಲಿಂದ ಶಿವನ ದೇಹವನ್ನು ತಂದು ಬೆಟ್ಟದಡಿಯ ದೇಗುಲದಲ್ಲಿರಿಸುತ್ತಾರೆ. ಅಂದು ಶಿವನು ಸದೇಹನಾಗಿ ಜನರಿಗೆ ಪೂರ್ಣಾಕಾರದಲ್ಲಿ ದರ್ಶನವನ್ನೀಯುತ್ತಾನೆ. ಅಂದು ಮಾತ್ರ ಪುರುಷರಾಗಲಿ ಅಥವಾ ಸ್ತ್ರೀಯರಾಗಲಿ ಯಾರೂ ಶಿವನನ್ನು ನೋಡಬಹುದು. ಆದರೆ ಶಿವನು ಮತ್ತೆ ಬೆಟ್ಟದ ಮೇಲಕ್ಕೆ ಹೋಗಿ ತನ್ನ ದೇವಾಲಯದಲ್ಲಿದ್ದರೆ, ಯಾವ ಸ್ತ್ರೀಯರೂ ಆ ದೇಗುಲದ ಮೇಲೆ ನೆರಳನ್ನೂ ಹಾಕುವಂತಿಲ್ಲ.

ಬೆಟ್ಟದಡಿಯ ದೇಗುಲವು ಘೋರಾರಣ್ಯದಲ್ಲಿದೆ. ಆ ದೇಗುಲದಮೇಲೆ ರವಿಯ ರಶ್ಮಿಗಳು ಬೀಳುವುದೇ ಕಡಿಮೆ. ಅದರ ಸಮೀಪಕ್ಕೆ ಲಂಬಾಣಿಗರೆಂಬ ಕಾಡು ಜಾತಿಯ ಜನರು ವಾಸಿಸುತ್ತಾರೆ. ಅಲ್ಲಿ ಸಾಗುವಳಿ ಮಾಡಲು ಭೂಮಿಗಳೇ ಇಲ್ಲ. ಸುತ್ತಲೂ ಹತ್ತಾರು ಮೈಲು ದಟ್ಟವಾದ ಅಡವಿ. ಯಾವ ಉದ್ಯೋಗವನ್ನೂ ಆ ಲಂಬಾಣಿಗರು ಮಾಡದೆ ಹೋದರೂ ಹಾಯಾಗಿ ಜೀವನವನ್ನು ಸಾಗಿಸುತ್ತಾರೆ. ಅವರ ಶಾಶ್ವತವೃತ್ತಿ ಚೋರವೃತ್ತಿ. “ಕಳ್ಳತನವನ್ನು ಮಾಡಿಯೇ ಜೀವನವನ್ನು ಸಾಗಿಸಬೇಕು” ಎಂದು ತಮ್ಮ ಮಕ್ಕಳಿಗೆ ಬೋಧಿಸುತ್ತಾರೆ. ಆ ರೀತಿಯಾಗಿ ಮಹಾಲಿಂಗನು ಅವರಿಗೆ ಶಾಪವಿತ್ತಿರುವನಂತೆ. ಅವರು ಜೀವನವನ್ನು ಸಾಗಿಸುವ ರೀತಿಯನ್ನು ನೋಡಿದರೆ ಅವರ ಮಾತಿನಲ್ಲಿ ತಥ್ಯವಿದೆಯೆಂದು ಕಂಡುಬರುತ್ತದೆ. ಆ ಬೆಟ್ಟದಡಿಯ ದೇಗುಲವನ್ನು ಲಂಬಾಣಿಗರ ಸಹಾಯವಿಲ್ಲದೆ ಯಾರೂ ಗುರುತಿಸುವಂತಿಲ್ಲ. ಅಂತಹ ನಿಬಿಡವಾದ ಅರಣ್ಯದಲ್ಲಿ ಆ ದೇಗುಲವಿದೆ. ಲಂಬಾಣಿಗಳೇ ಅದರ ಆರಾಧಕರು.

ಮಹಾಲಿಂಗನು ತನ್ನ ಹಸ್ತ–ಪಾದಗಳನ್ನು ಒಂದು ದೇಗುಲದಲ್ಲೇಕೆ ಬಿಟ್ಟ? ದೇಹವನ್ನು ಬೆಟ್ಟದ ಮೇಲಿನ ದೇಗುಲದಲ್ಲೇಕಿರಿಸಿದ? ಬೆಟ್ಟದಮೇಲಿನ ದೇಗುಲಕ್ಕೆ ಸ್ತ್ರೀಯರೇಕೆ ಹೋಗುವಂತಿಲ್ಲ? ಇಂದಿಗೂ ಆ ಲಂಬಾಣಿಗರು ಚೋರವೃತ್ತಿಯನ್ನೇಕೆ ಮಾಡಿ ಜೀವನವನ್ನು ಸಾಗಿಸುತ್ತಾರೆ? ಯಾವ ಇತಿಹಾಸವೂ ಇದಕ್ಕೆ ಸಮರ್ಪಕವಾದ ಉತ್ತರವನ್ನೀಯಲಾರದು. ಆದರೆ ತಲೆ

ತಲೆಗಳಿಂದಲೂ ಇಳಿದುಬಂದು ಆ ಹಳ್ಳಿಗರ ಮಧ್ಯೆ ನಿಂತಿರುವ ಅದೊಂದು ಕಥೆಯನ್ನು ಕೇಳಿದರೆ, ನಮ್ಮ ಮೇಲಿನ ಸಮಸ್ಯೆಗಳು ತಾವೇ ಪರಿಹಾರವಾಗುತ್ತವೆ. ಆ ಬೆಟ್ಟದಡಿಯ ದೇಗುಲದ ಸುತ್ತಲೂ ವಾಸಿಸುವ ಲಂಬಾಣಿಗರ ಊರು ಮಹಾಲಿಂಗಪೂರ. ಅಲ್ಲಿಯ ಲಂಬಾಣಿಗರು ಶಿರಹಟ್ಟಿಯ ಸುತ್ತುಮುತ್ತಲಿನ ಪ್ರದೇಶಗಳಿಗೆಲ್ಲಾ ತೊಂದರೆ ಕೊಡುತ್ತಾರೆ. ಸುಗ್ಗಿಯ ಸಮಯಕ್ಕಂತೂ ಅವರ ಕಳ್ಳತನವನ್ನು ಹಿಡಿದವರೇ ಇಲ್ಲ. ಕಳ್ಳತನದ ಅಪರಾಧಕ್ಕಾಗಿ ಒಂದು ಮನೆಯ ಯಜಮಾನನನ್ನು ಸೆರೆಹಿಡಿದರೆ ಆ ಊರಿನ ಉಳಿದ ಜನರು ಆ ಮನೆಯವನ ಹೆಂಡಿರು–ಮಕ್ಕಳನ್ನು ಪೋಷಿಸುತ್ತಾರೆ. ಹೀಗಾಗಿ ಅವರ ಆ ವೃತ್ತಿಯನ್ನು ಉಚ್ಚಾಟನೆ ಮಾಡುವುದೇ ಅಸಾಧ್ಯವಾಗಿದೆ.

ಸಹಸ್ರಾರು ವರುಷಗಳಾಚೆಯ ಸಂಗತಿ ಇರಬಹುದು: ಆ ಬೆಟ್ಟದ ತುದಿಯಲ್ಲಿ ವಿಸ್ತೀರ್ಣವಾದ ಪ್ರದೇಶವಿದೆ. ಅಲ್ಲಿ ವೀರಕೇಸರಿಯೆಂಬ ರಾಜನು ಆಳುತ್ತಿದ್ದನು. ಹೆಸರಿಗೆ ತಕ್ಕಂತೆ ಕೃತಿಯಲ್ಲಿಯೂ ಪರಿಣತನಿದ್ದನು. ಬೆಟ್ಟಕ್ಕೂ ಅವನ ಪ್ರದೇಶಕ್ಕೂ ಹತ್ತೆಂಟು ಗಾವುದ ದೂರ. ವೀರಕೇಸರಿ ಶಿವಭಕ್ತ. ಶಿವನನ್ನು ಭಜಿಸದೆ ಎಂದಿಗೂ ಭೋಜನವನ್ನು ಮಾಡುತ್ತಿರಲಿಲ್ಲ. ವೀರಕೇಸರಿಯ ಭಕ್ತಿಗೆ ಮೆಚ್ಚಿ ಶಿವನು ಕನಸಿನಲ್ಲಿ ಹೇಳಿದನಂತೆ.— "ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ನಿತ್ಯವೂ ದರ್ಶನವನ್ನೀಯಬೇಕೆಂಬ ಅಪೇಕ್ಷೆಯ ಮೂಲಕ ನಿನ್ನ ಬೆಟ್ಟದಲ್ಲಿಳಿದಿದ್ದೇನೆ. ಅಲ್ಲಿಯೇ ದೇಗುಲವನ್ನು ನಿರ್ಮಿಸಿ ನನ್ನನ್ನು ಪ್ರತಿಷ್ಠಾಪಿಸು."

ಮರುದಿವಸ ವೀರಕೇಸರಿಯು ತನ್ನ ಪರಿವಾರ ಸಮೇತನಾಗಿ ಬೆಟ್ಟಕ್ಕೆ ಬಂದು ಅದನ್ನು ಶೋಧಿಸಿದನು. ಒಂದು ವೃಕ್ಷದ ಕೆಳಕ್ಕೆ ಸುಂದರವಾದ ಶಿವನ ಮೂರ್ತಿಯು ನಿಂತಿತ್ತು. ವೀರಕೇಸರಿಯು ಸುಪ್ರೀತನಾಗಿ ಆ ಮೂರ್ತಿಯ ಸುಂದರತೆಗೆ ತಕ್ಕಂತೆ ಸುಂದರವಾದ ಹಾಗೂ ವಿಶಾಲವಾದ ದೇಗುಲವನ್ನು ಕಟ್ಟಿಸಲು ನಿರ್ಣಯಿಸಿದನು. ಆ ದೇಗುಲದ ನಿರ್ಮಾಣದ ಸನ್ನಾಹಕ್ಕಾಗಿ ರಾಜಧಾನಿಗೆ ಮರಳಿ ಬಂದನು. ಮಂತ್ರಿಗಳನ್ನು ಹಾಗು ರಾಣಿಯನ್ನು ವಿಚಾರಿಸಿ, ದೇಗುಲದ ರೂಪರೇಷೆಗಳನ್ನು ಯೋಚಿಸಿದನು. ರಾಜ್ಯದಲ್ಲಿಯ ಉತ್ತಮೋತ್ತಮ ಶಿಲ್ಪಿಗಳನ್ನು ಆಹ್ವಾನಿಸಿದನು. ದೇಗುಲದ

ನಿರ್ಮಾಣಕ್ಕಾಗಿ ತನ್ನ ಭಾಂಡಾರವನ್ನೇ ತೆರೆದಿಟ್ಟನು. ದೇಹದ ತುಂಬಾ ಕಣ್ಣುಗಳನ್ನು ಮಾಡಿಕೊಂಡು ಆ ಕಾರ್ಯಕ್ಕೆ ಸನ್ನದ್ಧನಾದನು. ಎಲ್ಲ ಸಾಮಗ್ರಿಗಳನ್ನು ಕೂಡಿಸಿಕೊಂಡು ಶಿಲ್ಪಿ ಸಮೇತ ಬೆಟ್ಟಕ್ಕೆ ಬಂದನು. ಆದರೆ ಅಲ್ಲಿದ್ದ ಶಿವಮೂರ್ತಿಯು ಎಲ್ಲಿಯೋ ಮಾಯವಾಗಿತ್ತು. ಯಾರೋ ದುಷ್ಟರು ಆ ಪ್ರತಿಮೆಯನ್ನು ಅಪಹರಿಸಿಕೊಂಡು ಹೋಗಿದ್ದರು.

ವೀರಕೇಸರಿಗೆ ಅತಿ ವಿಷಾದವೆನಿಸಿತು. ಇದೇಕೋ ಅಮಂಗಲವೆನಿಸಿತು. ಆದರೂ ದೇಗುಲವನ್ನು ಕಟ್ಟಲು ಶಿಲ್ಪಿಗಳಿಗೆ ಆಜ್ಞಾಪಿಸಿ, ತನ್ನ ಗುಪ್ತ ಚಾರರನ್ನು ರಾಜ್ಯದ ಅಷ್ಟದಿಶೆಗಳಿಗೂ ಕಳಿಸಿದನು. ಆ ಮೂರ್ತಿಯ ಶೋಧನೆಯಲ್ಲಿ ದೊರೆಯು ನಿದ್ದೆಯನ್ನೇ ಮಾಡದಾದನು. "ಆ ಮೂರ್ತಿ ಹೋದರೇನಾಯಿತು? ಅಂತಹ ಸಹಸ್ರಾರು ಸುಂದರ ಮೂರ್ತಿಗಳನ್ನು ಕಡೆಸುವ ಸಾಮರ್ಥ್ಯ ಹಾಗು ಸಂಪತ್ತುಗಳು ನಮ್ಮ ಬಳಿಯಿರಲು ಅದಕ್ಕೇಕೆ ಚಿಂತೆ?" ಎಂದು ರಾಣಿಯು ವೀರಕೇಸರಿಯನ್ನು ಕೇಳಿದಳು.

"ನಿನಗಿಂತಲೂ ಸುಂದರವಾದ ಸ್ತ್ರೀಯರು ಈ ರಾಜ್ಯದಲ್ಲಿ ನನಗೆ ದೊರೆಯುತ್ತಿರುವಾಗ, ನಿನ್ನನ್ನೇ ರಾಣಿಯೆಂದು ಏಕೆ ಕರೆಯುತ್ತೇನೆ? ನೀನು ಚಣ ಕಾಲ ಅಗಲಿದರೆ ನನಗೇಕೆ ದುಃಖವಾಗುತ್ತದೆ?" ಎಂದು ರಾಣಿಯನ್ನೇ ಮರಳಿ ಆತ ಪ್ರಶ್ನಿಸಿದನು. ರಾಣಿಗೆ ಮುಂದೆ ಮಾತನಾಡಲಿಕ್ಕೆ ಮಾರ್ಗವೇ ಉಳಿಯದಾಯಿತು.

ಪರಿಚಾರಕರು, ಅರಮನೆಯ ಪರಿವಾರದವರು, ರಾಜ್ಯಾಧಿಕಾರಿಗಳು ಹಾಗು ಪ್ರಜೆಗಳು ದೊರೆಯ ಚಿಂತೆಗಾಗಿ ವಿಷಾದಿಸಿದರು. ಶೋಧನೆಗೆಂದು ಹೋದ ಗುಪ್ತಚಾರರು ಒಬ್ಬೊಬ್ಬರೇ ನಿರಾಶರಾಗಿ ಮರಳಿ ಬರಹತ್ತಿದರು. ಯಾವ ಗುಪ್ತಚಾರನೂ ಮೂರ್ತಿಯು ಎಲ್ಲಿರುವದೆಂಬ ವಾರ್ತೆಯನ್ನೇ ತರದಾದನು. ಇತ್ತ ದೇಗುಲದ ನಿರ್ಮಾಣವು ನಡದೇ ಇತ್ತು. ದೇಗುಲವು ಏರುತ್ತ ನಡೆದಂತೆ ದೊರೆಯ ಮನಸ್ಸಿನ ಚಿಂತೆಯೂ ಹಿರಿದಾಗುತ್ತ ನಡೆಯಿತು. ಒಬ್ಬ ಚಾಣಾಕ್ಷ ಗುಪ್ತಚಾರನನ್ನುಳಿದು ಎಲ್ಲರೂ ನಿರಾಶರಾಗಿ ಮರಳಿ ರಾಜಧಾನಿಗೆ ಬಂದರು. ಆ ಒಬ್ಬನೇ ಒಬ್ಬ ಗುಪ್ತಚಾರನ ಮೇಲೆ ರಾಜನ ಆಶೆ

ಯಿತ್ತು. ಆ ಆಶೆಯ ಭರವಸೆಯ ಮೇಲೆ ವೀರಕೇಸರಿಯ ಜೀವವು ದೇಹ ವನ್ನು ಅಂಟಿಕೊಂಡಿತ್ತು.

ಆ ಒಬ್ಬನೇ ಒಬ್ಬ ಚಾಣಾಕ್ಷ ಗುಪ್ತಚಾರನಾದ ಯಶೋಧನನು, ನೇರವಾಗಿ ಲಂಬಾಣಿಗರ ವಸತಿಗೆ ತೆರಳಿ ಅಲ್ಲಿಯೇ ವಾಸಿಸಲು ಪ್ರಾರಂಭಿಸಿದನು. ಯಶೋಧನನು ಇರುತ್ತಿದ್ದ ಲಂಬಾಣಿಗರ ಯಜಮಾನನು ನಿತ್ಯವೂ ಯಶೋಧನನಿಗೆ ದೇವರ ತೀರ್ಥ-ಪ್ರಸಾದಗಳನ್ನು ಕೊಡುತ್ತಿದ್ದನು. "ಅವು ಎಲ್ಲಿಯವು? ಯಾವ ದೇವರವು?" ಎಂದು ಕೇಳಿದರೆ, ಆ ಲಂಬಾಣಿಯು ಹೇಳುತ್ತಿರಲಿಲ್ಲ. ಯಶೋಧನನು ಆ ಲಂಬಾಣಿಯ ಮಗಳ ಸ್ನೇಹವನ್ನು ಬೆಳೆಯಿಸಿ, ಎಲ್ಲಿ ಆ ಮೂರ್ತಿಯಿದೆಯೆಂಬುದನ್ನು ಕೇಳಿಕೊಂಡನು. ಅವರ ಬಳಿ ಮೂರ್ತಿಯು ಇರಲೇಬೇಕೆಂದು ಖಚಿತಪಡಿಸಿಕೊಂಡನು. ಒಮ್ಮೆ ಆ ಲಂಬಾಣಿ ಯಜಮಾನನನ್ನು ದೇಗುಲಕ್ಕೆ ಕರೆದೊಯ್ಯಬೇಕೆಂದು ಬಹುಪರಿಯಾಗಿ ಬೇಡಿಕೊಂಡನು. ಆ ಲಂಬಾಣಿಯು "ನಿನಗೆ ದೇವರ ದರ್ಶನವನ್ನು ಮಾಡಿಸುತ್ತೇನೆ. ಆದರೆ ಆ ದೇಗುಲದ ಹಾದಿಯನ್ನು ಮಾತ್ರ ತೋರಿಸಲಾರೆ. ಆದುದರಿಂದ ಕಣ್ಣಿಗೆ ಅರಿವೆಯನ್ನು ಕಟ್ಟಿ ನಿನ್ನನ್ನು ಅಲ್ಲಿಗೆ ಕರೆದೊಯ್ಯುತ್ತೇನೆ" ಎಂದು ಹೇಳಿದನು.

ಅದಕ್ಕೆ ಯಶೋಧನನು ಒಪ್ಪಿದನು. ಯಾರಿಗೂ ಕಾಣದಂತೆ ಕೈಯಲ್ಲಿ ಅಕ್ಕಿಯ ಕಾಳುಗಳನ್ನು ಹಿಡಿದುಕೊಂಡನು. ಆ ಲಂಬಾಣಿಯು ಯಶೋಧನನ ಕಣ್ಣುಗಳನ್ನು ಕಟ್ಟಿ ಕೈಯಲ್ಲಿ ಒಂದು ಕೋಲನ್ನು ಕೊಟ್ಟನು. ಆ ಕೋಲಿನ ಇನ್ನೊಂದು ತುದಿಯನ್ನು ಹಿಡಿದು ತಾನೆ ಮಾರ್ಗದರ್ಶನ ಮಾಡಿದನು. ಅವನ ಹಿಂದೆ ಹೊರಟ ಯಶೋಧನನು ಒಂದೊಂದೇ ಅಕ್ಕಿಯ ಕಾಳನ್ನು ಹಾದಿಗುಂಟ ಉದುರಿಸುತ್ತ ದೇಗುಲಕ್ಕೆ ಹೋದನು. ಅಲ್ಲಿ ಕಣ್ಣು ತೆರೆದ ಮೇಲೆ ದೇವರನ್ನು ನೋಡಿ ಸಂಪ್ರೀತಿಪಟ್ಟನು. ತಮ್ಮದೇ ಮೂರ್ತಿಯನ್ನು ಲಂಬಾಣಿಗರು ಕದ್ದಿರುವರೆಂದು ಖಚಿತಪಡಿಸಿಕೊಂಡನು. ಅಲ್ಲಿಯೇ ಏನಾದರೂ ಮಾಡಿದ್ದರೆ ಅವನ ಪ್ರಾಣವೇ ಉಳಿಯುವಂತಿರಲಿಲ್ಲ. ದೇವರನ್ನು ಪುನಃ ಪ್ರಾರ್ಥಿಸಿ, ಕುರುಡುಗಣ್ಣಿನಿಂದ ಆ ಲಂಬಾಣಿಯನ್ನು ಹಿಂಬಾಲಿಸಿ ಮನೆಗೆ ಬಂದನು.

ಆ ಲಂಬಾಣಿಯು ಕಣ್ಣು ತಪ್ಪಿಸಿ ಹಿಂದುಗಡೆ ಯಃಶೋಧನನು, ತಾನೊಗೆದ ಆಕ್ಕಿಯು ಕಾಳಿನಗುಂಟ ಹೋಗಿ ದೇಗುಲವನ್ನು ಗೊತ್ತುಪಡಿಸಿ ಕೊಂಡನು. ನಾಲ್ಕಾರು ದಿವಸಗಳ ವರೆಗೆ ಆ ಲಂಬಾಣಿಯುರ ಮನೆಯಲ್ಲಿದ್ದು, ಒಂದು ದಿವಸ ಅವರಿಗೆ ಹೇಳದಂತೆ ಆವರ ಮನೆಯನ್ನು ಬಿಟ್ಟು ತನ್ನ ರಾಜ್ಯಕ್ಕೆ ಬಂದನು. ತನ್ನ ದೊರೆಯಾದ ವೀರಕೇಸರಿಗೆ ಎಲ್ಲ ವೃತ್ತಾಂತವನ್ನು ಅರುಹಿ ದನು. ವೀರಕೇಸರಿಗೆ ತೃಪ್ತಿಯಾಯಿತು. ಯಶೋಧನನಿಗೆ ತಕ್ಕ ಮರ್ಯಾದೆ ಯನ್ನಿತ್ತನು. ಮತ್ತೆ ಅರಮನೆಯಲ್ಲಿ ಸಂಭ್ರಮದ ವಾತಾವರಣವು ಪಸರಿಸ ಹತ್ತಿತು. ದೊರೆಯು ಉಪಾಯವಾಗಿಯಾಗಲಿ ಅಥವಾ ಸೈನಿಕರ ಒತ್ತಾಯ ದಿಂದಾಗಲಿ ಆ ಮೂರ್ತಿಯನ್ನು ಕಿತ್ತು ತರಬೇಕೆಂದು ಬಯಸಿದನು. ತಾನು ಕಟ್ಟಿದ ದೇಗುಲಕ್ಕೆ ತಕ್ಕುದಾಗಿ ತನ್ನದೇ ಮೂರ್ತಿ ದೊರೆಯಿತೆಂದು ಸಂತೋಷ ಪಟ್ಟನು.

ಅಂದು ರಾತ್ರಿ ನಿದ್ರೆ ಹೋದಾಗ, ಕನಸಿನಲ್ಲಿ ಅಂದು ಕಾಣಿಸಿಕೊಂಡ ಶಿವನು ಮತ್ತೆ ಬಂದನು. ನಿನ್ನ ಸತ್ವಪರೀಕ್ಷೆಗೆ ನಾನು ಕಣ್ಣುತಪ್ಪಿಸಿದ್ದೆ ವೀರ ಸಿಂಹ! ನಿನ್ನಲ್ಲಿ ನಿಜವಾಗಿಯೂ ಭಕ್ತಿಯಿದೆ. ನನಗೆ ಆ ಲಂಬಾಣಿಗರು ಮಾಡುತ್ತಿರುವ ಸೇವೆಯನ್ನು ನೋಡಿದರೆ, ಅಲ್ಲಿಂದ ಹೊರಡಲೇಬಾರದೆಂದು ಎನಿಸುತ್ತದೆ. ಆದರೆ ನಿನ್ನ ಪ್ರೀತಿ ಅದಕ್ಕೂ ಅತ್ಯಧಿಕ! ನೀನು ಲಂಬಾಣಿಗ ರಿಂದ ನನ್ನನ್ನು ಕಿತ್ತುಕೊಂಡು ಬರಬೇಡ! ನಿನ್ನ ದೇಗುಲದ ಬಳಿಯೇ ಬಿದ್ದ ಕಪ್ಪು ಶಿಲೆಯಲ್ಲಿ ನಾನಿದ್ದೇನೆ. ಆ ಶಿಲೆಯನ್ನು ಕೆತ್ತಿ ನಿನಗೆ ಬೇಕಾದ ಹಾಗೆ ನನ್ನ ರೂಪವನ್ನು ಸಿದ್ಧಪಡಿಸಿಕೊಂಡು ಪ್ರತಿಷ್ಠಾಪಿಸು. ನನಗೆ ಬೇಸರಿಕೆ ಬಂದರೆ, ನಾನೇ ಆ ಲಂಬಾಣಿಗರಿಂದ ಹೊರಬರುವೆನು." ಎಂದು ಹೇಳಿ ದನು.

ದೊರೆಯು ಮರುದಿವಸ ಏಳುವ ಮುಂದೆ ಪ್ರಸನ್ನಚಿತ್ತನಾಗಿಯೇ ಎದ್ದನು. ಕಳೆದು ಹೋದ ರಾಜನ ಚೇತನೋತ್ಸಾಹಗಳು ಚಿಗುರುತ್ತಿದ್ದವು. ರಾಣಿಗೆ ತನ್ನ ಕನಸನ್ನು ತಿಳಿಸಿದನು. ಅದನ್ನು ಅವಳು ನಂಬದಾದಳು. ಅವ ಳಿಗೆ ದೇವರಲ್ಲಿ ಶ್ರದ್ಧೆಯೇ ಇರಲಿಲ್ಲ. ದೊರೆಯ ಒತ್ತಾಯಕ್ಕಾಗಿ ತಲೆದೂಗಿ ದಳು. ದೊರೆಗೆ ತಿಳಿದದ್ದು ಮಾಡಲು ತನ್ನ ಸಮ್ಮತಿಯನ್ನು ಸೂಚಿಸಿದಳು.

ಇತ್ತಕಡೆ ಮೊದಲೇ ನಿರ್ಮಿಸಲು ಪ್ರಾರಂಭವಾಗಿದ್ದ ದೇಗುಲವು ಮುಗಿಯುತ್ತ ಬಂದಿತ್ತು, ಆ ಸುಂದರ ದೇಗುಲವನ್ನು ನೋಡಲು ರಾಜ್ಯದ ಜನರು ತಂಡೋಪತಂಡವಾಗಿ ಬರುತ್ತಿದ್ದರು. ಆದರೆ ಒಳಕ್ಕೆ ಮೂರ್ತಿಯಿಲ್ಲ. ವೀರ ಕೇಸರಿಯು ಮತ್ತೆ ಎಲ್ಲ ಶಿಲ್ಪಿಗಳನ್ನೂ ಕಲೆಹಾಕಿ, ಅವರಿಗೆ ಮೂರ್ತಿಯನ್ನು ಸಿದ್ಧಪಡಿಸಲು ಹೇಳಿದನು. ಕಪ್ಪಾದ ಶಿಲೆ ಆ ದೇಗುಲದಿಂದ ಸ್ವಲ್ಪೇ ದೂರ ದಲ್ಲಿ ಬಿದ್ದಿತ್ತು. ಅದನ್ನು ತಂದು ಮಂಗಲಮುಹೂರ್ತವನ್ನು ನೋಡಿ ಶಿವನ ವಿಗ್ರಹವನ್ನು ಕೆತ್ತಲು ಆಜ್ಞಾಪಿಸಿದನು.

ಮೂರ್ತಿಯ ಕೆತ್ತನೆಯ ದಿವಸ ರಾಜ್ಯದ ತುಂಬ ಸಂಭ್ರಮದ ಉತ್ಸವ ಗಳು ಜರುಗಿದವು. ರಾಜ್ಯದ ವರಶಿಲ್ಪಿ ಬಂದು ಶಿಲೆಯನ್ನು ಪೂಜಿಸಿ ಚಾಣ ವನ್ನು ಶಿಲೆಗೆ ಹಚ್ಚಿದನು. ಹತ್ತಾರು ಸಲ ಆ ಚಾಣವನ್ನು ಶಿಲೆಗೆ, ತನ್ನ ಸಮಗ್ರ ಶಕ್ತಿಯನ್ನು ಉಪಯೋಗಿಸಿ ಹೊಡೆದನು. ಶಿಲೆಯ ತುಣುಕಿನ ಬದಲು ಆ ಚಾಣವೇ ಪುಟಿದು ಹೊರಬರುತ್ತಿತ್ತು. ಆ ವರಶಿಲ್ಪಿಯ ದೇಹದಿಂದ ಬೆವ ರಿಳಿಯಿತು. ಆದರೂ ಆ ಶಿಲೆಯಿಂದ ಕಣಮಾತ್ರವೂ ಹೊರಬರಲಿಲ್ಲ. ಎಲ್ಲ ರಿಗೂ ಆಶ್ಚರ್ಯವಾಯಿತು. ರಾಜ್ಯದ ಎಲ್ಲ ಶಿಲ್ಪಿಗಳೂ ಪ್ರಯತ್ನಿಸಿದರು. ಯಾರಿಗೂ ಆ ಶಿಲೆಯು ಒಲೆಯಲಿಲ್ಲ. ಅಷ್ಟು ಕಠಿಣವಾದ ಶಿಲೆ ಅದಾಗಿ ದ್ದಿತು. ಈ ಶಿಲೆಯ ವಾರ್ತೆ ಹರಡಿತು. ಮಾನವನಿಗೆ ಕಲ್ಲು ಬಗ್ಗದಾಗಿದ್ದು ಅವರ ಇತಿಹಾಸದಲ್ಲಿ ಅದೇ ಮೊದಲನೆಯದಾಗಿದ್ದಿತು. ದೊರೆಯು ಮತ್ತೆ ಚಿಂತಾಕ್ರಾಂತನಾದನು. ಶಿವನು ತನ್ನ ಸತ್ತ್ವಪರೀಕ್ಷೆಗೆ ಬೆನ್ನಟ್ಟಿಕೊಂಡೇ ಹೊರಟಿದ್ದಾನೆಂದು ಭಾವಿಸಿದನು. ಈ ಸಲ ಮಾತ್ರ ವೀರಕೇಸರಿಯು ಹಾಸಿಗೆ ಯನ್ನೇ ಹಿಡಿದನು. ಮನೋವ್ಯಾಧಿಯಿಂದ ಅರಮನೆಯನ್ನು ಬಿಟ್ಟು ಹೊರಕ್ಕೆ ಬಾರದಾದನು. ಸಮಗ್ರ ರಾಜ್ಯವೇ ಅರಸನ ಚಿಂತೆಗಾಗಿ ದುಃಖ ದಲ್ಲಿ ಮುಳುಗಿತು.

ಅಷ್ಟರಲ್ಲಿ ಅದೋರ್ವ ಶಿಲ್ಪಿಯು ಸ್ವಯಂಪ್ರೇರಣೆಯಿಂದ ಆ ಶಿಲೆಯಲ್ಲಿ ಮೂರ್ತಿಯನ್ನು ಕೆತ್ತುವುದಾಗಿ ಸಚಿವರಿಗೆ ಹೇಳಿದನು. ವಾರ್ತೆ ಸಚಿವರಿಂದ ದೊರೆಗಳ ಚಿತ್ತದ ವರೆಗೆ ತಲುಪಿತು. ವೀರಕೇಸರಿಗೆ ಚೇತನವು ಬಂದಂತಾ ಯಿತು. ವಿಶ್ವದಲ್ಲಿ ಒಬ್ಬರಾದರೂ ಆ ಶಿಲೆಯಲ್ಲಿ ಮೂರ್ತಿಯನ್ನು ಕೆತ್ತುವವರು

ಹುಟ್ಟಿದರೆಂದು ದೊರೆಗೆ ಅತೀವ ಸಂತೋಷವಾಯಿತು. ರಾಜ್ಯದ ಜನರೆಲ್ಲರೂ ಈ ಅಸಾಮಾನ್ಯ ಶಿಲ್ಪಿಯನ್ನು ನೋಡಲು ಬಂದರು. ಶಿಲ್ಪಿಯು ಮುದುಕನಾ ಗಿದ್ದರೂ ತೇಜಃಪುಂಜನಾಗಿದ್ದನು. ಶಿಲ್ಪಿಯು ಆಡಿದ ಮಾತನ್ನು ಮಾಡಿ ತೋರಿಸಿಯೇ ತೀರುವನೆಂಬ ಚಿನ್ಹವು ಅವನ ಮುಖದಲ್ಲಿ ಒಡೆದುಕಾಣುತ್ತಿತ್ತು.

ವೀರಕೇಸರಿಗೆ ಆ ಅಮರ ಶಿಲ್ಪಿಯು ಒಂದು ಕರಾರನ್ನು ಹಾಕಿದನು. "ಸ್ವಾಮೀ, ಆ ಶಿಲೆಯನ್ನು ದೇಗುಲದೊಳಕ್ಕಿಟ್ಟು ದೇಗುಲದಲ್ಲಿ ನನ್ನನ್ನು ಹಾಕಿ ಅದರ ದ್ವಾರಗಳನ್ನು ಮುಚ್ಚಿಸಿ ಬಿಡಬೇಕು. ಇಪ್ಪತ್ತೊಂದು ದಿವಸಗಳ ವರೆಗೂ ನನ್ನನ್ನು ಯಾರೂ ಕಾಣಬಾರದು. ಆ ದೇಗುಲದ ದ್ವಾರವನ್ನು ಇಪ್ಪತ್ತೊಂದು ದಿನದಲ್ಲಿ ತೆರೆದದ್ದಾದರೆ ನಿಮಗೆ ಅನಿಷ್ಟವು ಸಂಭವಿಸುವುದು. ಈ ಕರಾರಿಗೆ ಒಪ್ಪುವುದಾದರೆ ನಾನು ಆ ಕಾರ್ಯಕ್ಕೆ ಸಿದ್ಧನು." ಎಂದು ಹೇಳಿದನು.

ದೊರೆಗೆ ಇದರಲ್ಲಿ ಯಾವ ರೀತಿಯ ಮೋಸವೂ ಕಂಡುಬರಲಿಲ್ಲ. ಒಮ್ಮೆಲೆ ಅದಕ್ಕೆ ಒಪ್ಪಿದನು. ಆ ರೀತಿ ಶಿಲ್ಪಿಯನ್ನೂ ಹಾಗು ಶಿಲೆಯನ್ನೂ ದೇಗುಲದಲ್ಲಿರಿಸಿ, ದೇಗುಲದ ದ್ವಾರಗಳನ್ನು ಮುಚ್ಚಿಸಿ ಅದರ ಸುತ್ತಲೂ ಬಲ ವಾದ ಕಾವಲನ್ನಿಟ್ಟನು. ಶಿಲ್ಪಿಯು ದೇಗುಲದೊಳಕ್ಕೆ ಹೋಗಿ ವಾರ ಒಂದು ಕಳೆಯಿತು. ರಾಜ್ಯಕ್ಕೆ ರಾಜ್ಯವೇ ಕೌತುಕದಿಂದ ಇಪ್ಪತ್ತೊಂದನೆಯ ದಿನದ ಕೊನೆಯನ್ನು ನಿರೀಕ್ಷಿಸುತ್ತಲಿತ್ತು. ರಾಣಿಯು ನಿತ್ಯವು ದೇಗುಲಕ್ಕೆ ಬಂದು, ಅದರ ದ್ವಾರಕ್ಕೆ ಕಿವಿಹಚ್ಚಿ, ಏನಾದರೂ ಸಪ್ಪಳವು ಬರುವದೋ ಹೇಗೋ ಎಂದು ನೋಡುತ್ತಿದ್ದಳು. ಇಪ್ಪತ್ತನಾಲ್ಕು ಗಂಟೆಗಳ ವರೆಗೆ ನಿರೀಕ್ಷಿಸಿದರೂ ದೇಗುಲದಿಂದ ಯಾವ ರೀತಿಯ ಸಪ್ಪಳವೂ ಬರಲಿಲ್ಲ. ರಾಣಿಗೆ ಬಲವಾದ ಸಂಶಯ ಬಂದಿತು. ಇದರಲ್ಲಿ ಮೋಸವಿದೆಯೆಂದು ಭಾವಿಸಿ ತನ್ನ ಪತಿಗೆ ಎಚ್ಚರಿಕೆಯನ್ನಿತ್ತಳು. ವೀರಕೇಸರಿಯನ್ನು ದೇಗುಲಕ್ಕೆ ಕರೆದುಕೊಂಡು ಬಂದು ದ್ವಾರಕ್ಕೆ ಕಿವಿ ಹಚ್ಚಲು ಹೇಳಿದಳು. ಯಾವ ರೀತಿಯ ಸಪ್ಪಳವೂ ಬರುತ್ತಿರಲಿಲ್ಲ. ಶಿಲೆಯನ್ನು ಕೆತ್ತದೆ ಮೂರ್ತಿಯನ್ನು ಕೆತ್ತುವ ಶಿಲ್ಪಿ ಯಾರು? ಎಲ್ಲರಿಗೂ ಆಶ್ಚರ್ಯವಾಯಿತು.

ಅದಕ್ಕೆ ಆ ದೇಗುಲದ ದ್ವಾರಗಳನ್ನು ತೆರೆದು ವಸ್ತುಸ್ಥಿತಿಯನ್ನಾದರೂ ಅರಿಯಲು ರಾಣಿಯು ರಾಜನಿಗೆ ಒತ್ತಾಯಪಡಿಸಿದಳು. ಮೊದಮೊದಲು

ಲಂಬಾಣಿಗರು ಅಂದು ಶಿವನ ಮೂರ್ತಿಯನ್ನು ಬೆಟ್ಟದ ಮೇಲಿಂದ ಕದ್ದು ತಂದು ಕೆಳಗಿರಿಸಿದ್ದಕ್ಕೆ ಕಳ್ಳತನದಿಂದಲೇ ವೃತ್ತಿಯನ್ನು ಸಾಗಿಸಲು ಶಿವನು ಅಥವಾ ಮಹಾಲಿಂಗನು ಶಾಪವನ್ನಿತ್ತನು. ಎಂತಲೇ ಶಿವನ ದೇಹವು ಬೆಟ್ಟದ ಮೇಲಿದ್ದರೆ, ಅವನ ಹಸ್ತಪಾದಗಳು ಬೆಟ್ಟದಡಿಯ ದೇಗುಲದಲ್ಲಿ ಇಂದಿಗೂ ಇರುತ್ತವೆ.

ಹಳ್ಳಿಗರ ಮಾತಿನಲ್ಲಿ ತಥ್ಯವಿದೆ ಎಂಬುದು ಅವರು ಕಥೆಯನ್ನು ಹೇಳಿದ ಮೇಲೆ ತಿಳಿಯುತ್ತದೆ. ಶಿವನ ಅಥವಾ ಮಹಾಲಿಂಗನ ಅರ್ಧಾಕಾರದ ಮೂರ್ತಿಯ ದೇಗುಲವು ಇನ್ನೂ ಮಹಾಲಿಂಗನ ಬೆಟ್ಟದ ಮೇಲಿದೆ. ಬೆಟ್ಟದ ಕೆಳಕ್ಕಿದ್ದ ಆ ಪಾದಹಸ್ತಗಳ ಮಹಾಲಿಂಗನ ದೇಗುಲದ ಸುತ್ತಲೂ, ಲಂಬಾಣಿಗರು ಕಳ್ಳತನ ಮಾಡಿಯೇ ಜೀವನವನ್ನು ಸಾಗಿಸಿ ವಾಸಿಸುತ್ತಾರೆ.

# ಸ್ವರ್ಗಸುಖ

ಮದ್ದಳೆ–ತಮಟೆ–ತಾಳ–ಜಾಗಟೆ–ಶಂಖ–ಗಗ್ಗರಿ ಇರಳು ಸರಿಯುತ್ತಿದ್ದಂತೆ ತಾರಕ್ಕೇರಿ ಚಿನ್ನನು ರಂಗಸ್ಥಲಕ್ಕೆ ಬಂದು ಕುಣಿಯುವ ಹಾದಿಯನ್ನು ಕಾಯುತ್ತಿದ್ದವು. ಅವನು ಬಯಲಾಟದಲ್ಲಿ ಕುಣಿದಷ್ಟು, ಜನಕ್ಕೆ ಉತ್ಸಾಹ, ಹಾಡಿದಷ್ಟೂ ಆನಂದ, ಮಾತನಾಡಿದಷ್ಟೂ ತೃಪ್ತಿ. "ಚಿನ್ನನ ಅಂಗವಿನ್ಯಾಸದಂತೆ ಮದ್ದಳೆಯು ತನ್ನ ಲಯವನ್ನು ತಪ್ಪದೆ ನುಡಿಯುತ್ತಿದೆ" ಎಂದು ಒಳ್ಳೇ ಅಭಿಮಾನದಿಂದ ಚಿನ್ನನನ್ನು ಕತೆಗಾರರು ಪ್ರಶಂಸಿಸುತ್ತಿದ್ದರು. ತಮ್ಮ ಆಯುಷ್ಯದ ಮೂವತ್ತು ವೈಶಾಖಗಳನ್ನು ಬಯಲಾಟದಲ್ಲಿ ಕಳೆದ ಕತೆಗಾರರು ತಾವೆಲ್ಲಿಯೂ ಚಿನ್ನನಂಥ ನಟನನ್ನು ಕಾಣಲಿಲ್ಲವೆಂದು ಹೇಳುತ್ತಿದ್ದರು.

ಇನ್ನೂ ಇಪ್ಪತ್ತು ಯುಗಾದಿಗಳನ್ನು ಪೂರ್ತಿಯಾಗಿ ಕಾಣದ ಚಿನ್ನನು ನಾಲ್ಕು ವರುಷಗಳಿಂದೀಚೆಗೆ ಬಯಲಾಟದಲ್ಲಿ ಬಣ್ಣದ ಸೋಗನ್ನು ಹಾಕುತ್ತಿದ್ದನು. ಆಜಾನುಬಾಹು, ತುಂಬಿದ ದೇಹ, ಕೆಂಪು ವರ್ಣ, ಕಟೆದಂಥ ಮುಖಮಾಟ, ಆಕರ್ಷಕ ಕಣ್ಣುಗಳು, ನಗೆಯಿಂದ ನಲಿಯುವಂಥ ತುಟಿಗಳು —ಹೆಚ್ಚೇನು ಒಮ್ಮೆ ನೋಡಿದರೆ ತೃಪ್ತಿಯೆನಿಸದಂತಹ ಸುಂದರ ವ್ಯಕ್ತಿತ್ವವನ್ನು ಪಡೆದಿದ್ದನು ಚಿನ್ನ! ಹರಿಪುರ ಗ್ರಾಮದಲ್ಲಿ ಅವನಿಗೆ ತುಂಬಾ ಗೌರವ. ಗ್ರಾಮದ ಹೆಣ್ಣುಮಕ್ಕಳ ಹೃದಯವನ್ನು ಸೆರೆಹಿಡಿದ ಮನ್ಮಥನಂತೆ ಚಿನ್ನನು ಮೆರೆಯುತ್ತಿದ್ದನು. ಅವನಿಗೆ ಮನೆಯಾಗಲಿ, ತಂದೆ-ತಾಯಿ, ಅಕ್ಕ-ಅಣ್ಣ-ತಂಗಿ-ತಮ್ಮಂದಿರಾಗಲಿ ಯಾರೂ ಇದ್ದಿರಲಿಲ್ಲ. ಹರಿಪುರ ಗ್ರಾಮದ ಹೊರವಲಯದಲ್ಲಿ ಪುರಾತನ ಕಾಲದಿಂದಲೂ ನಿಂತ ಅಮೃತೇಶ್ವರ ದೇವಾಲಯವೇ ಅವನ ಮನೆ, ಅಮೃತೇಶ್ವರನೇ ಅವನ ಸರ್ವಸ್ವವು. ಅವನಿಗೆ ಬಂದ ನೈವಿದ್ಯವೇ ಇವನ ಆಹಾರ. ಹರಿಪುರ ಗ್ರಾಮವೇ ಅವನನ್ನು ರಕ್ಷಿಸುತ್ತಿತ್ತು.

ಸ್ವರ್ಣಳನ್ನು ಕಂಡರೆ ಆನಂದ, ಅಭಿಮಾನ. ಇಬ್ಬರಿಗೂ ಸಂಗೀತದಲ್ಲಿ, ಕುಣಿತದಲ್ಲಿ ಬಹುಪ್ರೀತಿ.

ಚಿನ್ನನು ಪರಿಶುದ್ಧ ಮನಸ್ಸಿನ ವ್ಯಕ್ತಿ. ಅವನಿಗೆ ದೇವರ ಸೇವೆಯೆಂದರೆ ಬಹು ಪ್ರೀತಿ. ಒಂದೊಂದು ಸಲ ರಾತ್ರಿಯೆಲ್ಲವೂ ದೇವರೆದುರು ಮದ್ದಳೆ ಬಾರಿಸುತ್ತ ಕುಳಿತುಬಿಡುತ್ತಿದ್ದನು. ಒಂದೊಂದು ರಾತ್ರಿ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಿದ್ದನು. ಇತ್ತೀಚೆಗಂತೂ ಅಮೃತೇಶ್ವರನ ಗರ್ಭಗೃಹಬಿಟ್ಟು ಗ್ರಾಮದಲ್ಲಿ ಕಾಲಿಕ್ಕುತ್ತಿರಲಿಲ್ಲ. ಅವನು ದೇವಾಲಯದ ಅಧಿಕಾರ ವಹಿಸಿ ಕೊಂಡ ಮೇಲೆ ಪೂಜೆ ನೈವೇದ್ಯ, ನೈರ್ಮಲ್ಯ ಕಾಯ್ದುಕೊಂಡು ಹೊರಟಿದ್ದನು. ಆ ಗ್ರಾಮದಲ್ಲಿ ಮೂರು ವರ್ಷಗಳಿಂದಲೂ ಒಳ್ಳೇ ಸಮೃದ್ಧಿಯಾದ ಮಳೆ ಬೆಳೆ ಬಂದಿತ್ತು. ಅಮೃತೇಶ್ವರನು ಪ್ರೀತಿಪಟ್ಟಿದ್ದರಿಂದ ಫಲ ದೊರೆಯಿತೆಂದೂ ಅವ ನನ್ನು ಚಿನ್ನನೇ ಸುಪ್ರೀತಿಪಡಿಸಿದನೆಂದೂ ಗ್ರಾಮದವರು ನಂಬಿದ್ದರು. ನಿಜಕ್ಕೂ ಚಿನ್ನನು ಇತ್ತೀಚೆಗೆ ಭಕ್ತಿಪಾಶಗಳಿಂದ ಬಂಧಿತನಾಗಿ ದೇವರ ಧ್ಯಾನ ಒಂದನ್ನೇ ಜೀವನದ ಗುರಿಯನ್ನಾಗಿ ಮಾಡಿಕೊಂಡು ವಿಶೇಷವಾಗಿ ಜನರನ್ನು ಕೂಡ ಮಾತಾಡಿಸುತ್ತಿರಲಿಲ್ಲ.

ಎರಡು ಸುಗ್ಗಿಗಳು ಬಂದು ಹೋದರೂ ಚಿನ್ನನು ರಂಗಸ್ಥಲಕ್ಕೆ ಬರಲು ಒಪ್ಪಲಿಲ್ಲ. ದೇವರ ಸೇವೆಗೆ ಸಮಯ ಸಿಗದಾಗ ಬಯಲಾಟಕ್ಕೆಲ್ಲಿ ದೊರೆಯ ಬೇಕೆಂದು ಅವನು ಅನ್ನುತ್ತಿದ್ದನು. ಚಿನ್ನನಿಲ್ಲದ ಆಟವೆಂದರೆ ರಸರಹಿತ ಕಬ್ಬಿ ದ್ದಂತೆ. ಒಮ್ಮೆ ಆಟವಾದಾಗ ಸುತ್ತಲಿನ ಹಳ್ಳಿಯವರೇಕೆ, ಆ ಗ್ರಾಮದವರೇ ಪೂರ್ತಿಯಾಗಿ ನೋಡಲು ಬಂದಿರಲಿಲ್ಲ. ಅದರ ಕಾರಣ ಆ ದೊಡ್ಡಾಟದಲ್ಲಿ ಚಿನ್ನನಿಲ್ಲದ್ದು. ಚಿನ್ನನಿಗೇಕೆ ಮದುವೆ? ಎಂದು ಹಾಸ್ಯ ಮಾತಾಡುತ್ತಿದ್ದ ಕುಹಕಿಗಳು ಚಿನ್ನನಿಗೆ ಸ್ವರ್ಣಳನ್ನು ಕಾಣಲು ಸಮಯ ದೊರೆಯದಾಗಿದೆ. ಅವಳ ವ್ಯತಿರಿಕ್ತ ಅವನಿಗೆ ಯಾರ ಧ್ಯಾನವೂ ಬೇಡ. ತಾನು ಬಣ್ಣದ ಸೋಗನ್ನು ಹಾಕಿ ಎರಡು ವರ್ಷ ಕುಣಿದರೆ ದೊಡ್ಡ ನಟನೆಂದು ನಂಬಿದ್ದಾನೆ." ಎಂದು ಅಪಹಾಸ್ಯ ಮಾಡುತ್ತಿದ್ದರು.

ಅಂದು ಶಿವರಾತ್ರಿಯ ಹಿಂದಿನ ದಿವಸ ಆ ಗ್ರಾಮದ ಇತಿಹಾಸದಲ್ಲಿಯೇ ಒಂದು ಅಭೂತಪೂರ್ವ ಸವಾಡವಾಯಿತು. ಶಿವರಾತ್ರಿಯ ದಿವಸ ಅಮೃತೇ

ಶ್ವರ ದೇವಾಲಯದಲ್ಲಿ ಉತ್ಸವವಾಗುತ್ತಿತ್ತು. ಮರುದಿವಸದ ಉತ್ಸವಕ್ಕಾಗಿ ರಾತ್ರಿ ಕೆಲವರು ಮಾವಿನ ತೋರಣಗಳನ್ನು ಕಟ್ಟಿ ದೇವಾಲಯವನ್ನು ಅಲಂಕರಿಸಲು ಬಂದರು. ಅಂದು ರಾತ್ರಿ ಅರ್ಧ ಸರಿದಾಗ ಚಿನ್ನನು ದೇವರಿದುರು ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತಿದ್ದನು.

ಅವನ ಕುಣಿತವು ಒಳ್ಳೇ ಏರಿಕೆಯಲ್ಲಿತ್ತು. ಮದ್ದಳೆಯ ಧ್ವನಿ ಸ್ಪಷ್ಟವಾಗಿ ಕೇಳದಿದ್ದರೂ ಮದ್ದಳೆಯ ಲಯದಂತೆ ಚಿನ್ನನು ಕುಣಿಯುತ್ತಿದ್ದನು. ಸೂಕ್ಷ್ಮವಾಗಿ ಆಲಿಸಿದರೆ ಗರ್ಭಗೃಹದಿಂದ ಮದ್ದಳೆಯ ಧ್ವನಿ ಬರುತ್ತಿತ್ತು. ಹೊರಗೆ ನಿಂತವರಿಗೆ ಗೊತ್ತು, ಚಿನ್ನನನ್ನು ಬಿಟ್ಟು ಬೇರಾರೂ ದೇವಾಲಯದಲ್ಲಿಲ್ಲವೆಂಬುದು. ಅವರಿಗೆ ಅತ್ಯಂತ ಆಶ್ಚರ್ಯವಾಯಿತು. ರಾತ್ರಿಯ ನೀರವ ನಿಶ್ಶಬ್ದತೆಯಲ್ಲಿ ಚಿನ್ನನ ಕಾಲಿನ ಗೆಜ್ಜೆಯ ಸಪ್ಪಳ, ಗರ್ಭಗೃಹದಿಂದ ಬರುತ್ತಿದ್ದ ಮದ್ದಳೆಯ ಧ್ವನಿ ಹರಿದು ದಶದಿಕ್ಕುಗಳಿಗೂ ಪಸರಿಸಿತು. ಬಂದವರ ಕುತೂಹಲವು ಕೆರಳಿತು. ರಾತ್ರಿ ಸರಿಯಹತ್ತಿದಂತೆ ಮದ್ದಳೆಯು ತಾರಕ್ಕೇರಿತು. ಚಿನ್ನನ ಕುಣಿತವು ಕಳೆಯಿಟ್ಟಿತು. ಅವನು ಆಟವಲ್ಲಿ ಕುಣಿದಂತೆ ಕುಣಿಯಲು ಪ್ರಾರಂಭಿಸಿದನು.

ಅಲ್ಲಿ ನಿಂತವರು ಕುತೂಹಲದಿಂದ ಇನ್ನಷ್ಟು ಇಣಕಿಕ್ಕಿ ನೋಡಿದರು. ಅಮೃತೇಶ್ವರನ ಕೊರಳಲ್ಲಿ ಚಿನ್ನನ ಮೃದಂಗವಿತ್ತು. ಕಲ್ಲಿನ ಮೂರ್ತಿ ಬಾರಿಸದಿದ್ದರೂ ಧ್ವನಿ ಸ್ಪಷ್ಟವಾಗಿ ಬರುತ್ತಿತ್ತು. ಅವನ ಕುಣಿತಕ್ಕೆ ಭಂಗ ತರಬಾರದೆಂದು ಬಂದವರು ಮರಳಿಬಿಟ್ಟರು. ಅವರಿಗೆ ಚಿನ್ನನಲ್ಲಿ ದೈವದ ಅಂಶವಿರಬೇಕೆಂದು ಭಾಸವಾಯಿತು ಶಿವರಾತ್ರಿಯ ಬೆಳಗಿನಲ್ಲಿ ವಾರ್ತೆ ಎಲ್ಲೆಡೆಗೂ ಹಬ್ಬಿತು. ಚಿನ್ನನಿಗೆ ಅದನ್ನು ಕೇಳಿದರೆ, ತಾನು ಕುಣಿದಿಲ್ಲವೆಂದೇ ಹೇಳಿದನು. ಆದರೆ ಆ ದೃಶ್ಯವನ್ನು ಕಂಡ ಹತ್ತೆಂಟು ಚಕ್ಷುಗಳು ಚಿನ್ನನಲ್ಲಿ ದೈವದಂಶವಿರಬೇಕೆಂದು ಅಂದರು. ಇರದೇ ಹೋದರೆ, ಗರ್ಭಗೃಹದಿಂದ ಮದ್ದಳೆಯ ಧ್ವನಿ ಏಕೆ ಬರಬೇಕು ? ಶಿಲಾಮೂರ್ತಿ ಅಮೃತೇಶ್ವರನು ಬಾರಿಸುವದು ಅಸಾಧ್ಯವೆಂದು ಅಂದರು. ಚಿನ್ನನು ನಿಜವಾದ ಸುದ್ದಿಯನ್ನು ಹೇಳಿದ್ದು ಸ್ವರ್ಣಳೊಬ್ಬಳಿಗೆ.

"ಚಿನ್ನಾ, ನಿನ್ನೆ ರಾತ್ರಿ ನೀನು ತುಂಬಾ ಕುಣಿಯುತ್ತಿದ್ದಿಯಂತೆ. ಅಮೃ

ತೇಶ್ವರನ ಕೊರಳಲ್ಲಿ ನಿನ್ನ ಮದ್ದಳೆ ಹಾಕಿತ್ತಂತೆ. ಮೃದಂಗದ ಧ್ವನಿ ಯಾರೂ ಬಾರಿಸದಿದ್ದರೂ ತಾನೇ ತಾನಾಗಿ ಬರುತ್ತಿತ್ತಂತೆ. ಹೌದೇ ?" ಎಂದು ತನ್ನ ಹರಿಣಿಯಂತಹ ಕಣ್ಣನ್ನರಳಿಸಿ ಕೇಳಿದಳು.

ಮುಗುಳು ನಗೆ ನಗುತ್ತ "ನನ್ನಲ್ಲಿ ನಿನ್ನ ನಂಬಿಕೆಯಿದೆ ತಾನೆ ?" ಚಿನ್ನ ಸ್ವರ್ಣಳನ್ನು ಕೇಳಿದನು.

"ನಿನ್ನಲ್ಲಿ ನನಗೆ ಹದಿನಾರಾಣೆ ವಿಶ್ವಾಸವಿದೆ. ನನಗೆ ಅಮೃತೇಶ್ವರ ಬೇರೆಯಲ್ಲ, ನೀನು ಬೇರೆಯಲ್ಲ" ಎಂದು ಸ್ವರ್ಣಳು ತನ್ನ ನಂಬಿಗೆಯನ್ನು ವ್ಯಕ್ತಪಡಿಸಿದಳು.

"ನಾನು ಕುಣಿಯುತ್ತಿದ್ದೆ ಸ್ವರ್ಣ. ನನ್ನ ಸ್ವಾಮಿ ಅಮೃತೇಶ್ವರನು ಮದ್ದಳೆ ಬಾರಿಸುತ್ತಿದ್ದ. ನಾನು ಅನೇಕ ಸಲ ಕುಣಿದಾಗ ಅವನು ಬಾರಿಸಿ ದ್ದಾನೆ. ನನ್ನ ಸ್ವಾಮಿಗೆ ನನ್ನ ಕುಣಿತವೆಂದರೆ ಪ್ರೀತಿ. ಜನಕ್ಕೆ ಹೇಳಿದರೆ ದೇವರ ಬದಲು :ದೆವ್ವನೆನ್ನುತ್ತಾರೆ ಸ್ವರ್ಣ. ಅಂತಲೇ ಹೇಳಿಲ್ಲ" ಎಂದು ಚಿನ್ನನು ನುಡಿದನು

"ಚಿನ್ನಾ, ನನಗೊಂದು ದಿವಸ ನಿನ್ನ ಸ್ವಾಮಿ ಮೃದಂಗ ಬಾರಿಸುವ ದನ್ನು ತೋರಿಸುತ್ತೀಯಾ ?" ಆತನಿಗೆ ಕೇಳಿದಳು.

"ಸ್ವರ್ಣಾ, ನಿನಗೆ ಅವನಲ್ಲಿ ಭಕ್ತಿಯಿದ್ದರೆ, ನಾನೇಕೆ, ನೀನು ಕುಣಿದರೂ ಬಾರಿಸುತ್ತಾನೆ. ಅವನು ಭಕ್ತರ ಕೈವಾರಿ. ಅದಕ್ಕೆ ಪುಣ್ಯ ಬೇಕು" ಎಂದು ಚಿನ್ನನು ಪ್ರಾಂಜಲ ಮನಸ್ಸಿನಿಂದ ಹೇಳಿದನು.

"ನನ್ನನ್ನು ಅಂಥ ಪುಣ್ಯವಂತಿಯನ್ನಾಗಿ ಮಾಡುವದು ನಿನಗೆ ಸೇರಿದೆ ಚಿನ್ನಾ" ಎಂದು ಹೇಳಿ ಅವನ ಪಾದಗಳನ್ನು ಮುಟ್ಟಿ ನಮಸ್ಕರಿಸಿದಳು. ಚಿನ್ನನು ಅವಳ ಭುಜಗಳೆರಡನ್ನೂ ಹಿಡಿದೆತ್ತಿ ಅವಳ ಬೆನ್ನನ್ನು ಮೃದುವಾಗಿ ನೇವರಿಸಿ "ಆ ಪುಣ್ಯವನ್ನು ನೀನು ಪಡೆಯುತ್ತೀ ಸ್ವರ್ಣಾ" ಎಂದು ಹೇಳಿ ನಕ್ಕನು.

ಚಿನ್ನನಲ್ಲಿ ದೇವರ ಅಂಶವಿರಬೇಕೆಂದು ಕೆಲವರು, ದೆವ್ವನ ಅಂಶವಿರ ಬೇಕೆಂದು ಕೆಲವರು, ಅವನು ಠಕ್ಕನಿರಬೇಕೆಂದು ಬೇರೆ ಕೆಲವರು, ಚಿನ್ನಪ್ಪ ನೆಂದರೆ ಸತ್ಯವಾದಿ ಎಂದು ಬೇರೆ ಹಲವರು ಮಾತನಾಡಿದರು. ಚಿನ್ನನೆಂದರೆ

ದೇವರೆಂದು ತಿಳಿದವಳು ಸ್ವರ್ಣ. ಸ್ವರ್ಣಳಿಗೆ ಅವನ ಮೃದಂಗದ ಕಥೆ ಸತ್ಯೆ ವೆನಿಸಿತು.

ಸ್ವರ್ಣಳಿಂದು ಹದಿನೆಂಟು ವಸಂತಗಳನ್ನು ಕಳೆದು ಹೆಣ್ಣಾಗಿದ್ದಾಳೆ. ಹರಿಪುರದ ಸುಂದರ ಪುಷ್ಪವೊಂದು ಅರಳಿ ನಿಂತಿದೆ. ಸ್ವರ್ಣಳ ತಾಯಿ ಶಾರದೆ ತನ್ನ ವೃತ್ತಿಯಿಂದ ಇಂದ್ರಭವನದಂಥ ಮನೆ, ಮನೆತುಂಬ ಚಿನ್ನ, ಮನೆಯಲ್ಲಿ ಚಿನ್ನದಂಥ ಸ್ವರ್ಣಳನ್ನು ಪಡೆದು ಜೀವನದ ಎಲ್ಲ ಆಶೆಗಳನ್ನೂ ಪೂರೈಸಿಕೊಂಡಿದ್ದಳು. ಊರ್ವಶಿಯ ಸೌಂದರ್ಯವನ್ನು ಕೋರೈಸುವಂತಹ ಚೆಲುವು ಸ್ವರ್ಣಳಲ್ಲಿದ್ದುದಕ್ಕೆ ಶಾರದೆಗೆ ತುಂಬಾ ತೃಪ್ತಿ. ತನ್ನ ಸೌಂದರ್ಯದಿಂದ ಮನೆತುಂಬಾ ಚಿನ್ನವನ್ನು ಮಾಡಿದ್ದರೂ ಸ್ವರ್ಣಳ ಸಗ್ಗಸೌಂದರ್ಯದಿಂದ ಮನೆಯನ್ನೇ ಚಿನ್ನದ್ದನ್ನಾಗಿ ಮಾಡಲು ಹವಣಿಸುತ್ತಿದ್ದಳು. ಶಾರದೆಗೆ ಯೌವ್ವನವಿರುವಾಗ ಅವಳನ್ನು ಬೆನ್ನಟ್ಟುತ್ತಿದ್ದ ಸಿರಿವಂತ ದುಂಬಿಗಳು ಹೆಚ್ಚು. ಅಂತಲೇ ಮಗಳನ್ನು ಭ್ರಮರರಾಜ್ಞಿಯನ್ನಾಗಿ ಮಾಡಲು ತಾಯಿಯ ಆಶೆ.

ಸ್ವರ್ಣಳು ತನ್ನ ತಾಯಿಯ ವಾತಾವರಣದಲ್ಲಿ ನಿತ್ಯವೂ ಹರಿಸಿದ್ದರೂ ಅದರಿಂದ ಅಲಿಪ್ತಳಂತಿದ್ದಳು. ಅವಳ ದೇಹಸುಖ ದೊರೆಯದೆ ಹೋದರೂ ಅದರ ಅನುಭವವನ್ನು ಪಡೆಯಲು ಅವಳ ದೇಹದ ಮೇಲೆ ಕೈಯಾಡಿಸಲು ಹಾತೊರೆಯುತ್ತಿದ್ದ ಜನರು ಹೆಚ್ಚು. ಆದರೆ ಸ್ವರ್ಣಳೆಂದರೆ ಸಿಟ್ಟಿಗೆದ್ದ ಸರ್ಪ ವಿದ್ದಂತೆ. ಅವಳನ್ನು ತಡವುವದು ಶಾರದೆಯ ಏಕಮಾತ್ರ ಸ್ವಾಮಿಯಾದ ಸಂಕಪ್ಪಶೆಟ್ಟಿಗೂ ಸಾಧ್ಯವಿರಲಿಲ್ಲ. ಶಾರದೆ ತನ್ನ ರೂಪವನ್ನೆಲ್ಲಾ ಧನಕ್ಕಾಗಿ ಮಾರಿದ ಮೇಲೆ ಸಂಕಪ್ಪಶೆಟ್ಟಿಯೊಬ್ಬನನ್ನೇ ನಂಬಿ ಜೀವನ ಸಾಗಿಸುತ್ತಿದ್ದಳು. ತಾನಿಂದು ಸಂಕಪ್ಪಶೆಟ್ಟಿಯೊಬ್ಬನನ್ನೇ ನಂಬಿದ್ದರಿಂದ ಗರತಿಯೆಂದು ಹೇಳುತ್ತಿದ್ದಳು. ಸ್ವರ್ಣಳು ಸಂಕಪ್ಪಶೆಟ್ಟಿಯ ಪುಣ್ಯದಿಂದಲೇ ದೊರೆತಳೆಂದು ಅನೇಕರೆದುರು ಮಾತನಾಡುತ್ತಿದ್ದಳು. ಆದರೆ ಸ್ವರ್ಣಳು ಹೆಣ್ಣಾದ ಮೇಲೆ ಆ ಮಾತನ್ನಾಡುತ್ತಿರಲಿಲ್ಲ. ಸ್ವರ್ಣಳನ್ನು ಸಂಕಪ್ಪಶೆಟ್ಟಿಗಾಗಿ ಮೀಸಲಿರಿಸಿದ್ದಾರೆಂಬ ವಾರ್ತೆ ಗ್ರಾಮದಲ್ಲಿತ್ತು. ಸಂಕಪ್ಪಶೆಟ್ಟಿಗೂ ಆ ವಾರ್ತೆಯಿಂದ ಅಭಿಮಾನ. ತನ್ನ ಕುಬೇರನಂಥ ಭಾಂಡಾರವನ್ನು ಆ ಹೆಣ್ಣಿಗಾಗಿ ತೆರೆದಿಟ್ಟಿರುವೆನೆಂದು ಸಂಕಪ್ಪಶೆಟ್ಟಿ ಹೇಳುತ್ತಿದ್ದನು. ಸ್ವರ್ಣಳು ಸಂಕಪ್ಪಶೆಟ್ಟಿಯ ಪುಣ್ಯ

ದಿಂದ ಜನಿಸಿ ಪುಣ್ಯವಶಾತ್ ಸಂಕಪ್ಪಶೆಟ್ಟಿಗೇನೇ ಮೀಸಲಾಗಿರುವಳೆಂದು ಜನರು ಹಾಸ್ಯ ಮಾಡುತ್ತಿದ್ದರು.

ಅವಳು ಹೆಣ್ಣಾಗುವ ಅಮೃತ ನಿಮಿಷಕ್ಕೆ ಕಾದು ನಿಂತಿದ್ದವರಿಗೆಲ್ಲಾ ಆತ್ಮಾನಂದವಾಯಿತು. ಶಾರದೆಗೆ ನಾವಿಲ್ಲ, ಲಕ್ಷ್ಮೀದೇವಿಯೇ ಕಣ್ಣು ತೆರೆದಂತಾಯಿತು. ಅಂದು ಶಾರದೆಯ ಮನೆಯಲ್ಲಿ ಹಬ್ಬ. ತುಂಬಾ ಗಳು ಆಹ್ವಾನಿತರಾಗಿದ್ದರು. ಅತಿಥಿಗಳೆಂದರೆ ಹರಿಪುರ ಗ್ರಾಮದ ಸಿರಿವಂತರೇ ಸೇರಿದ್ದರು. ಯಾರಿಗಾಗಿ ಪುಷ್ಪವು ಅರಳಿ ನಿಂತಿದೆಯೋ ಯಾರು ಬಲ್ಲರು ? ಅಂದಂತೂ ಸ್ವರ್ಣಳ ಮುಖದ ಮೇಲೆ ಎಲ್ಲಿಲ್ಲದ ಸೌಂದರ್ಯವು ನಲಿಯುತ್ತಿತ್ತು. ಅವಳಿಗೆ ತನ್ನ ಮನೆಯ ಉತ್ಸವ, ತಾಯಿಯ ಉತ್ಸಾಹ ಅರ್ಥವಾಗುತ್ತ ಬರಹತ್ತಿತು. ಅವಳ ಮುಖದಲ್ಲಿ ಅದೇಕೋ ಅಷ್ಟು ಗೆಲವು ಇದ್ದಿರಲಿಲ್ಲ. ಶಾರದೆ ಮಾತನಾಡಿದಷ್ಟು ಸ್ವರ್ಣಳು ಮಾತನ್ನು ತಪ್ಪಿಸುತ್ತಿದ್ದಳು. ಅಂದಿನ ಆಮಂತ್ರಿತರಲ್ಲಿ ಚಿನ್ನನೂ ಒಬ್ಬನಿದ್ದನು. ಆದರೆ ಅವನು ಬಂದಿರಲಿಲ್ಲ ಅವನ ಬರುವಿಗಾಗಿ ಸ್ವರ್ಣಳ ಚಕ್ಷುಗಳೆರಡನ್ನು ಬಿಟ್ಟು ಬೇರಾರೂ ಅರಸುತ್ತಿರಲಿಲ್ಲ. ಚಿನ್ನ ಬಂದು ಒಮ್ಮೆ ತನ್ನನ್ನು ನೋಡಿ ನಕ್ಕರೆ ಸಾಕು ಎಂದು ಅವಳ ಅಭಿಲಾಷೆ. ಹರಿಪುರದ ಸಿರಿತನವನ್ನು ಕಾಣಬೇಕಿದ್ದರೆ ನಾವಲ್ಲಿ ಹೋಗಬೇಕಿತ್ತು. ಶಾರದೆ ತಾನೇ ನಿಂತು ಸ್ವರ್ಣಳನ್ನು ವಿಧವಿಧವಾಗಿ ಶೃಂಗರಿಸಿದ್ದಳು.

ಭಾರವಾದ ಫಲಾಹಾರವಾದ ಮೇಲೆ ನೃತ್ಯವಾಯಿತು. ಆ ಮೇಲೆ ಸ್ವರ್ಣಳ ಸ್ವರ್ಣಮಯ ಸಂಗೀತ. ಅವಳಿಗೆ ಹಾಡಲು ಮನಸ್ಸಿರಲಿಲ್ಲ. ತಾಯಿಯ ಒತ್ತಾಯಕ್ಕೆ ಹಾಡಿದಳು. ಅವಳ ಹಾಡು ಮುಗಿದಾಗ ಅವಳೆದುರು ರೂಪಾಯಿ, ಬಂಗಾರದುಂಗುರ, ಬಂಗಾರ ಸರಗಳು ರಾಶಿರಾಶಿಯಾಗಿ ಬಿದ್ದಿದ್ದವು. ಅಂದು ಎಲ್ಲರ ಕಣ್ಣುಗಳೂ ಸ್ವರ್ಣಳ ಮೇಲೆ ನಟ್ಟಿದ್ದವು.

ಇತ್ತ ಸಂಗೀತ ನಡೆದಾಗ ದೇವಾಲಯದಲ್ಲಿ ಚಿನ್ನನು ಎಂದಿನಂತೆ ಮದ್ದಳೆ ಬಾರಿಸುತ್ತಿದ್ದ. ಅಮೃತೇಶ್ವರನ ಬಳಿ ಕುಳಿತಿದ್ದನು. ಅವನಿಗೆ ಸ್ವರ್ಣಳ ಮನೆಯ ಆಮಂತ್ರಣದ ಅರಿವು ಇದ್ದಿರಲಿಲ್ಲ. ಒಮ್ಮೆಲೆ ಅವನಿಗೆ ಅದರ ನೆನಪು ಬಂದಿತು. ಮದ್ದಳೆಯನ್ನು ಬಿಟ್ಟು ಅವಳ ಮನೆಗೆ ಬಂದಾಗ ಸಂಕಪ್ಪಶೆಟ್ಟಿಯೊಬ್ಬರನ್ನು ಬಿಟ್ಟು ಉಳಿದ ಅತಿಥಿಗಳು ಹೊರಟು ಹೋಗಿದ್ದರು.

ಚಿನ್ನನು ನೇರವಾಗಿ ಸ್ವರ್ಣಳ ಕೋಣೆಗೆ ಹೋದನು. ಅದೇಕೋ ಅವಳ ದೇಹವನ್ನು ನಿರಾಶೆ ಆವರಿಸಿತ್ತು. ಅವಳು ಎಷ್ಟೇ ಅಲಂಕೃತಳಾಗಿದ್ದರೂ ಮುಖದ ಮೇಲೆ ನಿತ್ಯವೂ ಇರುತ್ತಿದ್ದ ಗೆಲವು ಇದ್ದಿರಲಿಲ್ಲ. ಚಿನ್ನನು ಬಂದು ಸ್ವರ್ಣಳನ್ನು ಕೂಗಿದಾಗ ಅವಳಿಗೆ ಆಶ್ಚರ್ಯದೊಡನೆ ಆನಂದವೂ ಆಯಿತು. ಏಕೆ ಬರಲಿಲ್ಲವೆಂದು ಕೇಳಿದಳು. "ಅಮೃತೇಶ್ವರನೆದುರು ಮದ್ದಳೆ ಬಾರಿಸುತ್ತ ಕುಳಿತೆ; ಸಮಯವೇ ತಿಳಿಯಲಿಲ್ಲ ಸ್ವರ್ಣ" ಎಂದು ಹೇಳಿದನು.

"ಅಮೃತೇಶ್ವರನ ಧ್ಯಾನದಲ್ಲಿ ನಮ್ಮಂಥವರ ನೆನಪು ನಿನಗೆಲ್ಲಿ ಚಿನ್ನಾ, ಸ್ವಲ್ಪ ಕುಳಿತಿರು" ಎಂದು ತನ್ನ ಶಯ್ಯೆಯ ಮೇಲೆ ಕುಳ್ಳಿರಿಸಿ ತಾನು ಫಲಾಹಾರ ತರಲು ಒಳಗೆ ಓಡಿದಳು. ಅಂದು ಮಾಡಿದ ಎಲ್ಲ ಫಲಾಹಾರವನ್ನೂ ಚಿನ್ನನೆದುರು ಇಟ್ಟು ತಿನ್ನಲಿಕ್ಕೆ ಹೇಳಿದಳು.

"ನನಗೆ ಹಸಿವೆ ಇಲ್ಲ ಸ್ವರ್ಣಾ, ಇಷ್ಟನ್ನೆಲ್ಲಾ ಏಕೆ ತಂದೆ?" ಎಂದು ಕೇಳಿದನು.

"ನೀನು ಇದನ್ನೆಲ್ಲಾ ಇಂದು ತಿನ್ನಲೇ ಬೇಕು" ಎಂದು ಅಧಿಕಾರ ವಾಣಿಯಿಂದ ಹೇಳುವಂತೆ ಹೇಳಿದಳು.

"ಇಂದೇನು ? ನಿನ್ನ ಹುಟ್ಟಿದ ಹಬ್ಬವೇನು?" ಎಂದು ಕೇಳಿದನು.

ನಾಚಿಕೆಯಿಂದ ಅವಳ ಗಲ್ಲಗಳು ಕೆಂಪಡರಿದವು. ಪೂರ್ಣ ಚಂದ್ರನಂತಿದ್ದ ಮುಖವನ್ನು ಕೆಳಕ್ಕೆ ಮಾಡಿ "ಇಂದು....ನಾ....ನು....ಹೆಣ್ಣಾಗಿದ್ದೇನೆ ಚಿನ್ನಾ" ಎಂದು ಮುಗುಳುನಗೆ ನಗುತ್ತ ನುಡಿದಳು.

ಚಿನ್ನನು ತನ್ನೆದುರು ಇಟ್ಟ ಎಲ್ಲ ಫಲಾಹಾರವನ್ನು ಸ್ವರ್ಣಳ ಒತ್ತಾಯದಿಂದ ತಿಂದನು. ಅವಳಿಗೆ ಅದೇ ಆನಂದವಾಯಿತು. ಚಿನ್ನನು ಎದ್ದು ಹೋದನು. ದೂರದಲ್ಲಿ ಕುಳಿತು ಕಣ್ಣರಳಿಸಿ, ಮುಖವನ್ನು ಕೆರಳಿಸಿ ನೋಡುತ್ತಿದ್ದ ಸಂಕಣ್ಣಶೆಟ್ಟರಿಗೆ ಇದೊಂದೂ ಅರ್ಥವೇ ಆಗಲಿಲ್ಲ. ಸಂಶಯ ಪಿಶಾಚಿ ಅವರಿಗೆ ಬಡೆಯಿತು. ತಮ್ಮ ಭೋಗಕ್ಕಾಗಿ ಮೀಸಲಿದ್ದ ಬೆಲೆವೆಣ್ಣು ಈ ರೀತಿ ಮಾಡುವದು ಸಹಿಸದಾಯಿತು. ಶಾರದೆಯನ್ನು ಕರೆದು ಸ್ವರ್ಣಳು ಮಾಡುವ ತಪ್ಪನ್ನೆಲ್ಲಾ ಶೆಟ್ಟರು ಹೇಳಿದರು. ಶಾರದೆ ಏನನ್ನೋ ಹೇಳಿ ಸಮಾಧಾನಮಾಡಿದಳು. ಒಂದು ರಾತ್ರಿ ಶೆಟ್ಟರಿಗೆ ಸ್ವರ್ಣಳು ಮೀಸಲೆಂದು ಆಶ್ವಾಸನ ಕೊಟ್ಟಳು.

ಶೆಟ್ಟರು ಹೋದ ಮೇಲೆ "ಸ್ವರ್ಣಾ ನೀನು ಇಂದು ಕೂಸಲ್ಲ; ಹೆಣ್ಣಾಗಿ ರುವಿ. ಆ ದರಿದ್ರ ಚಿನ್ನನನ್ನು ಮಾತನಾಡಿಸಬೇಡ" ಎಂದು ಹೇಳಿದಳು.

ಸ್ವರ್ಣಳು ಏನನ್ನೂ ಮಾತನಾಡಲಿಲ್ಲ. "ಒಂದು ರಾತ್ರಿ ಸ್ವರ್ಣಾ ನಿಮಗೆ ಮೀಸಲಾಗಿದ್ದಾಳೆ ಶೆಟ್ಟರೆ" ಎಂಬ ತಾಯಿಯ ಮಾತು ಅವಳ ಕಿವಿಯಲ್ಲಿ ಕಾಸಿದ ಸೀಸವನ್ನು ಸುರುವಿದಂತಾಯಿತು. ಸ್ವರ್ಣಳೆಂದೂ ತಾನು ಸಂಕಪ್ಪಶೆಟ್ಟರ ಭೋಗಕ್ಕಾಗಿ ಹುಟ್ಟಿದವಳೆಂದು ತಿಳಿದಿರಲಿಲ್ಲ. ಚಿನ್ನನು ಒಮ್ಮೆ ಅವಳಿಗೆ ದೇವಾಲಯಕ್ಕೆ ಬರಲು ಆಹ್ವಾನ ಕೊಟ್ಟಿದ್ದನು. ಚಿನ್ನನಿಗೆ ಸ್ವರ್ಣಳ ಮುಖದಲ್ಲಿ ಒಂದು ಅಲೌಕಿಕ ಸುಂದರತೆ ಕಂಡಿತ್ತು. "ನಾನು ಹೆಣ್ಣಾಗಿದ್ದೇನೆ ಚಿನ್ನಾ" ಎಂಬ ಸ್ವರ್ಣಳ ಮಾತು ಚಿನ್ನನ ಮೇಲೆ ಅಷ್ಟು ಪರಿಣಾಮ ಮಾಡಲಿಲ್ಲ. ಅವನಿಗೆ ಮನಸ್ಸಿನ ಮೇಲೆ ವಿಶೇಷ ಪರಿಣಾಮವಾಗದೇ ಹೋದರೂ ಸ್ವರ್ಣಳಲ್ಲಿ ಯಾವದೋ ಒಂದು ಬದಲಾವಣೆಯಾಗಿದೆಯೆಂದು ತಿಳಿಯಿತು.

ಸಂಕಪ್ಪಶೆಟ್ಟರಿಗೆ ಮೀಸಲಾಗಿದ್ದ ದಿನವು ಸಮೀಪಿಸಿತು. ಕಾಲಚಕ್ರದ ನಿಮಿಷವೂ ಕೂಡ ಶೆಟ್ಟರಿಗೆ ಯುಗವಾಗಹತ್ತಿತು. ರವಿ ತಾಯ ಮಡಲಿನಲ್ಲಿ ಸೇರಲು ಇನ್ನೂ ಮೂರುದ್ದ ಮುಗಿಲನ್ನು ಕ್ರಮಿಸಬೇಕಲ್ಲಾ ಎಂದು ಶೆಟ್ಟರಿಗೆ ಚಿಂತೆ. ಜೀವನದ ರಸನಿಮಿಷಗಳಿಗಾಗಿ ಅವರು ಆಶಿಸುತ್ತಿದ್ದರು. ಹರಿಪುರ ಗ್ರಾಮದ ಪ್ರೇಮ ಸಾಮ್ರಾಜ್ಯದ ಇತಿಹಾಸದಲ್ಲಿಯೇ ಶೆಟ್ಟರಂದು ಹೊಸ ಹೆಜ್ಜೆ ಇಡಲಿದ್ದಾರೆ. ಯಾವ ಸ್ವರ್ಣಳಿಗಾಗಿ ಇಡೀ ಗ್ರಾಮವೇ ಕಾಯುತ್ತಿತ್ತೋ, ಆ ಹೆಣ್ಣು ಇಂದು ಶೆಟ್ಟರಿಗೆ ಮೀಸಲೆಂದರೆ ಅವರಿಗೆ ಸ್ವರ್ಗವೇ ಸಿಕ್ಕಂತಿತ್ತು. ಅಂದು ಏನಿಲ್ಲೆಂದರೂ ಸಹಸ್ರಾರು ರೂಪಾಯಿ ವೆಚ್ಚ ಮಾಡಿದ್ದರು. ಸ್ವರ್ಣಳಿಗಾಗಿ ಒಂದು ಜೊತೆ ಬಂಗಾರದ ಬಳೆ, ಕೊರಳಿಗೆ ಮುತ್ತಿನ ಹಾರ, ಬೆರಳಿಗೊಂದು ವಜ್ರದ ಉಂಗುರವನ್ನು ಮಾಡಿಸಿದ್ದರು. ಇಪ್ಪತ್ತು ವರ್ಷಗಳಿಂದಲೂ ಶಾರದೆಯ ಮನೆಯ ಹಾದಿ ತುಳಿದು ಕಾಲುಗಳು ನೇರವಾಗಿ ಅಲ್ಲಿಗೆ ಹೋದವು.

ಶಾರದೆಯ ಮನೆ ಇಂದು ಅವರಿಗೆ ಹೊಸದಾಗಿತ್ತು. ಅವಳ ಮನೆಯ ವಸ್ತುಗಳಲ್ಲೆಲ್ಲಾ ಸ್ವರ್ಣಳ ಚಿತ್ರವು ಶೆಟ್ಟರಿಗೆ ಕಾಣುತ್ತಿತ್ತು. ಎಷ್ಟೋ ವರ್ಷಗಳನ್ನು ಅದೇ ಕೋಣೆ, ಅದೇ ಹಾಸಿಗೆ, ಅದೇ ವಸ್ತುಗಳೊಡನೆ ಕಳೆದಿದ್ದರೂ

ಇಂದು ಮಾತ್ರ ಅವುಗಳಲ್ಲಿ ಒಂದು ನಾವೀನ್ಯ ಕಾಣುತ್ತಿತ್ತು. ಇಂದು ಶೆಟ್ಟರ ಭೋಗಕ್ಕಾಗಿ ನಡೆದು ಬರುವ ಹೆಣ್ಣು ಇಪ್ಪತ್ತು ವರ್ಷಗಳಿಂದಲೂ ಸಂಪರ್ಕ ವನ್ನಿಟ್ಟುಕೊಂಡ ಶಾರದೆಯಲ್ಲ. ಶಾರದೆಯ ಸೌಂದರ್ಯ ಕರಗಿ ಹೋಗಿದೆ.

ಸ್ವರ್ಣಳಿಗೆ ರಾತ್ರಿಯ ಕಲ್ಪನೆಯೇ ಬರುತ್ತಿರಲಿಲ್ಲ. ಚಿನ್ನನು ಅಂದು ದೇವಾಲಯಕ್ಕೆ ಬರಲು ಮತ್ತೆ ಆಮಂತ್ರಿಸಿದ್ದನು. ಬಂದರೆ, ಅಂದು ಕಲ್ಲು ಮೂರ್ತಿ ಅಮೃತೇಶ್ವರನು ಮದ್ದಳೆ ಬಾರಿಸುವದನ್ನು ತೋರಿಸುವೆನೆಂದು ಹೇಳಿದ್ದನು. ಶಾರದೆಯು ಸಂಜೆಯ ಮುಂದೆ ಸ್ವರ್ಣಳನ್ನು ಅಲಂಕರಿಸಿದಳು. ಅವಳಿಗೆ ಹೆರಳನ್ನು ಹಾಕಿ ಆವಳನ್ನು ಹೊರಳಿಸಿ ಅವಳ ಮುಖನೋಟ ತನ್ನಕಿಂತ ತನ್ನ ಸ್ವರ್ಣಳು ಸುಂದರಳೆಂದು ತಿಳಿದು ಮನಸ್ಸಿನಲ್ಲಿಯೇ ತೃಪ್ತಿಬಟ್ಟಳು. ಒಂದು ಹತ್ತು ವರ್ಷ ಕಾಲ ಸ್ವರ್ಣಳ ರೂಪ ಉಳಿದರೆ ಶಾರದೆ ಇನ್ನೊಂದು ಚಿನ್ನದ ಮನೆಯನ್ನು ಕಟ್ಟಿಸುವೆನೆಂದು ಲೆಕ್ಕ ಹಾಕಿದಳು. ಆ ದಿನವೇ ಶೆಟ್ಟರಿಗೆ ಮೀಸಲಾಗಿತ್ತು. ಅಂದೇ ಸ್ವರ್ಣಳ ಮಾನವು ಮಾರಲಿದ್ದ ಪ್ರಥಮ ದಿನ.

ದೀಪಗಳು ಹತ್ತಿದವು. ಶೆಟ್ಟರು ಕ್ಷಣಕ್ಷಣಕ್ಕೂ ಕೋಣೆಯ ಬಾಗಿಲದ ಕಡೆ ಹಣಿಕಿ ಹಾಕುತ್ತಿದ್ದರು. ಅದಾಗಲೇ ಅವರು ಶಾರದೆಯ ಕೋಣೆಯನ್ನು ಆಕ್ರಮಿಸಿದ್ದರು. ಶಾರದೆಯು ಸ್ವರ್ಣಳ ಕೈಗಳೆರಡನ್ನು ಹಿಡಿದು ಕೋಣೆಯಲ್ಲಿ ಕಳಿಸಿದಳು. ಸ್ವರ್ಣಳು ಎದುರಿಗೆ ತಲೆಯೆತ್ತಿ ನೋಡಿದಾಗ ಸಂಕಪ್ಪಶೆಟ್ಟರು ! ಅವಳ ದೇಹವೇ ಉಡುಗಿತು. ಶೆಟ್ಟರನ್ನು ಸ್ವರ್ಣಳು ಚಿಕ್ಕಂದಿನಿಂದಲೂ ಬಲ್ಲಳು. ಅವಳು ನೋಡುತ್ತಿರುವಾಗಲೇ ಶೆಟ್ಟರು ಅವಳ ಕೈಯನ್ನು ಹಿಡಿದು ತಮ್ಮ ಬಳಿ ಕುಳ್ಳಿರಿಸಿಕೊಂಡರು. ಹೂವಿನಂಥ ಬೆರಳನ್ನೆತ್ತಿ ತಾವು ತಂದ ಉಂಗುರವನ್ನು ಹಾಕಿದರು. ಕೊರಳಲ್ಲಿ ಹಾರ, ಕೈಗಳಿಗೆ ಬಳೆ ಹಾಕಿದರು. ಆದರೆ ಮ್ಲಾನವಾಗಿದ್ದ ಅವಳ ಮುಖದಲ್ಲಿ ಮುಗುಳ್ನಗೆಯ ಚಿನ್ನವೇ ಕಾಣಲಿಲ್ಲ. ತಾವು ಇನ್ನೂ ಬೇಕಾದ ವಸ್ತುಗಳನ್ನು ಕೊಡುವದಾಗಿ ಹೇಳಿದರು. ಸ್ವರ್ಣಳು ಮಾತನಾಡಲಿಲ್ಲ. ಶೆಟ್ಟರು ಮತ್ತಿಷ್ಟು ಅವಳನ್ನು ತಮ್ಮ ಹತ್ತರ ಎಳೆದುಕೊಂಡರು.

"ನನ್ನ ತಾಯಿ ಶೆಟ್ಟರ ಭೋಗದ ವಸ್ತು; ನಾನು ಆವಳ ಮಗಳು. ನನಗೆ....ಶೆ....ಟ್ಟ....ರು ಏನಾಗಬೇಕು?" ಎಂಬ ಮಾತು ಅವಳ ಮನಸ್ಸಿನಲ್ಲಿ

ಮೂಡಿದಾಗ ಹೇಸಿಕೊಂಡಳು. ಆ ಬಂಧನವನ್ನು ಹರಿದೊಗೆಯುವದು ಅವಳಿಗೆ ದೈಹಿಕವಾಗಿ ಸಾಧ್ಯವಿರಲಿಲ್ಲ. ಶೆಟ್ಟರ ಕಾಮತೃಷೆಯನ್ನು ತೀರಿಸಲೇ ಬೇಕಿತ್ತು. ಮರುದಿವಸ ಮುಖವೆಲ್ಲ ಮ್ಲಾನವಾಗಿತ್ತು. ನಸುಕಿನಲ್ಲಿ ಎದ್ದು ದೇವಾಲಯಕ್ಕೆ ಹೋದಳು. ಚಿನ್ನನನ್ನು ನೋಡಿದಳು. ಚಿನ್ನನನ್ನು ನೋಡಿದ ಕೂಡಲೇ ಅವಳ ದುಃಖವು ಉಕ್ಕಿಬಂದಿತು.

"ಚಿನ್ನಾ, ಸ್ವರ್ಣಳು ಸತ್ತಳೆಂದು ಭಾವಿಸಿದೆಯಾ? ಅಂದು ಎರಡೇ ಎರಡು ಮಾತನಾಡಿ ಹೊರಟು ಹೋದಿ" ಎಂದು ಹೇಳಿ ತನ್ನ ಸಮಗ್ರ ಇತಿಹಾಸವನ್ನೇ ಹೇಳಿದಳು. ಮತ್ತೆ ತಾನು ಚಿನ್ನನೊಡನೆ ಕುಣಿತವನ್ನು ಹೇಳಿಸಿಕೊಳ್ಳಬೇಕೆಂದು ನಿರ್ಧರಿಸಿದಳು. ಚಿನ್ನನನ್ನು ನೋಡಿದ ಕೂಡಲೇ ಅವಳ ಮನಸ್ಸು ಉದ್ರೇಕಗೊಂಡಿತು. ಅವಳ ಮನಸ್ಸು ಅವನನ್ನು ಬಯಸಿತು. ಚಿನ್ನನು ಮಾತ್ರ ನಿರ್ವಿಕಾರ ಮನಸ್ಸಿನಿಂದ ಸ್ವರ್ಣಳೊಡನೆ ಮಾತನಾಡಿ ಅವಳ ಸುಖದುಃಖಗಳನ್ನು ಕೇಳಿಕೊಂಡನು. ದುಃಖವೆಂದರೆ ಏನು ಎಂದು ಇದುವರೆಗೆ ಸ್ವರ್ಣಳು ಕೇಳುತ್ತಿದ್ದರೆ, ನಿನ್ನೆ ರಾತ್ರಿಯಿಂದ ಅದನ್ನೇ ಅನುಭೋಗಿಸ ಹತ್ತಿದ್ದಾಳೆ. ಸ್ವರ್ಣಳಲ್ಲಿ ಏನೋ ಬದಲಾವಣೆಯಾಗಿದೆಯೆಂದು ಚಿನ್ನನಿಗನಿಸಿತು.

ನಿತ್ಯವೂ ಸ್ವರ್ಣಳು ಚಿನ್ನನಲ್ಲಿ ಪಾಠಗಳನ್ನು ಹೇಳಿಸಿಕೊಳ್ಳಲು ಬರಹತ್ತಿದಳು. ಒಂದೊಂದು ದಿವಸ ರಾತ್ರಿಯಾದರೂ ಸ್ವರ್ಣಳು ಚಿನ್ನನನ್ನು ಬಿಟ್ಟು ಬರುತ್ತಿರಲಿಲ್ಲ. ಶೆಟ್ಟರು ಹಾದಿ ಕಾಯ್ದು ಬೇಸರಿಯುತ್ತಿದ್ದರು. ಸ್ವರ್ಣಳಿಗೆ ಅನೇಕ ಸಲ ಹೇಳಿದರು. "ಸಂಪತ್ತಿಗಾಗಿ ನಾನು ದೇಹವನ್ನು ಮಾರುತ್ತಿರುವಾಗ ಶೆಟ್ಟರಿಗೇನು, ಬೇರೆಯವರಿಗೇನು?" ಎಂದು ತಾಯಿಗೆ ಹೇಳುತ್ತಿದ್ದಳು. "ಶೆಟ್ಟರು ಮಹಾ ಕೋಪಿಷ್ಠರು. ಅವರಿಗೆ ನಾನು ನಿನ್ನನ್ನು ಧಾರೆ ಎರೆದಿದ್ದೇನೆ ಮಗು" ಎಂದು ತಾಯಿ ಹೇಳಿದಳು. ಸ್ವರ್ಣಳು ಯಾವ ಮಾತನ್ನೂ ಆಡಲಿಲ್ಲ.

ಅದೊಂದು ರಾತ್ರಿ ನಿತ್ಯವೂ ಅಮೃತೇಶ್ವರನ ದೇವಾಲಯಕ್ಕೆ ಹೋಗುತ್ತಿದ್ದ ಸ್ವರ್ಣಳು ಅಂದೂ ಹೋದಳು. ಅಂದು ಚಿನ್ನನು ದೇವರಿಗೆ ಎಲೆ ಪೂಜೆ ಮಾಡಿದ್ದನು. ಬಹು ದಿವಸಗಳಿಂದಲೂ ನಡೆದುಬಂದ ಸಂಗೀತ ಸೇವೆ

ಯನ್ನು ಸಲ್ಲಿಸಬೇಕೆಂದು ಅಂದು ಮಾಡಿದ್ದನು. ಸ್ವರ್ಣಳ ಸಂಗೀತವಾಯಿತು. ತಾನು ಅಂದು ಕುಣಿಯುವದಾಗಿ ಹೇಳಿ ಕುಣಿಯಹತ್ತಿದನು. ರಾತ್ರಿ ಸರಿಯುತ್ತಿತ್ತು. ಚಿನ್ನನ ಕುಣಿತಕ್ಕೆ ಮದ್ದಳೆಯನ್ನು ಯಾರು ಬಾರಿಸಬೇಕು? ಅಮೃತೇಶ್ವರನ ಕೊರಳಲ್ಲಿ ಮದ್ದಳೆ ಹಾಕಿದನು. ತಾನು ಕುಣಿಯಲು ಪ್ರಾರಂಭಿಸಿದನು. ಆದರೆ ಮದ್ದಳೆ ಬಾರಿಸಲೇ ಇಲ್ಲ. "ಅಮೃತೇಶ್ವರಾ, ಇಂದು ಸ್ವರ್ಣಾ ಬಂದಿದ್ದಾಳೆ ಬಾರಿಸಪ್ಪ. ಅವಳಿಗೆ ಮದ್ದಳೆ ಬಾರಿಸುವದನ್ನು ತೋರಿಸುವೆನೆಂದು ಹೇಳಿದ್ದೇನೆ." ಎಂದು ಪ್ರಾರ್ಥಿಸಿದನು. ಆದರೆ ಅಮೃತೇಶ್ವರನು ಕಲ್ಲುಮೂರ್ತಿಯಾಗಿ ಹಾಗೆಯೇ ಕುಳಿತಿದ್ದನು. ಚಿನ್ನನು ಬಹುಪರಿಯಾಗಿ ದೇವರನ್ನು ಬೇಡಿಕೊಂಡನು. ಆದರೆ ಅವನ ಮನಸ್ಸು ಕರಗಲಿಲ್ಲ. ನೀನು ಬಾರಿಸದಿದ್ದರೆ ನಾನು ತಲೆ ಒಡೆದುಕೊಂಡು ಸಾಯುತ್ತೇನೆ" ಎಂದು ಆರ್ಭಟಿಸಿದನು. ಆ ಮಾತನ್ನು ಕೇಳಿ ಸ್ವರ್ಣಳು ಅಂಜಿದಳು. ಆದರೆ ಚಿನ್ನನಲ್ಲಿ ವೀರಾವೇಶವಿತ್ತು. ಅವನ ಮುಖ ಗಾಂಭೀರ್ಯ, ಅವನ ತೇಜಸ್ಸು ನೋಡಿ ಭೀತಳಾದಳು. "ನನ್ನ ಸ್ವರ್ಣಳ ಮುಂದೆ ನನ್ನ ಅಪಮಾನವೇ?" ಎಂದು ಅನ್ನುತ್ತ ಗರ್ಭಗೃಹದ ಒಳಕ್ಕೆ ಹೋಗಿ ದೇವರ ಪಾದಗಳಿಗೆ ತಲೆ ಜಜ್ಜಹತ್ತಿದನು. ಗರ್ಭಗೃಹವು ರಕ್ತದ ಮಡುವಿನಲ್ಲಿ ನಿಂತರೂ ಅಮೃತೇಶ್ವರನು ಮದ್ದಳೆಯನ್ನು ಬಾರಿಸಲಿಲ್ಲ.

ಚಿನ್ನನ ದೇಹವನ್ನು ತಂದು ತನ್ನ ತೊಡೆಯ ಮೇಲೆ ಹಾಕಿಕೊಂಡು ದೇವರನ್ನು ಮನಸ್ಸಿನಲ್ಲಿ ಸ್ತುತಿಸಿದಳು. ಅವನ ಬಟ್ಟೆಗಳನ್ನು ಸರಿಪಡಿಸಿ ಅವನ ದೇಹದ ತುಂಬಾ ಕೈಗಳನ್ನಾಡಿಸಹತ್ತಿದಳು. ಮದ್ದಳೆಯ ಧ್ವನಿ ಪ್ರಾರಂಭವಾಯಿತು. ಗರ್ಭಗೃಹದಿಂದ ಹೊರಬರಹತ್ತಿತು. "ಅಮೃತೇಶ್ವರಾ, ಕೊನೆಗೆ ನನಗೊಮ್ಮೆ ಬಾರಿಸಿ ತೋರಿಸಿದೆಯಲ್ಲಾ? ಆದರೆ ಅದರ ಉಪಯೋಗವೇನು? ಚಿನ್ನನು ಅದನ್ನು ಬೇಡಿ ಬಯಸಿದನು. ಆದರೆ ನನ್ನೆದುರು ಬಾರಿಸಿದರೆ ಏನು?" ಎಂದು ಅನ್ನುತ್ತ ಅವಳು ಅವನ ದೇಹದ ಮೇಲೆ ಒರಗಿಕೊಂಡಳು.

ಹೊರಗಡೆ ಇಂದು ಚಿನ್ನನನ್ನು ಕೊಂದು ಸ್ವರ್ಣಳ ಸಂಕಲ್ಪವನ್ನೇ ತಪ್ಪಿಸಬೇಕೆಂದು ಶೆಟ್ಟರು, ಶಾರದೆ ಸುಸಜ್ಜಿತರಾಗಿ ಬಂದಿದ್ದರು. ಅವರಿಗೆ ದೂರ

ದಿಂದಲೇ ಮದ್ದಳೆಯ ಧ್ವನಿ ಕೇಳುತ್ತಿತ್ತು. ಹಾಗಾದರೆ ಇನ್ನೂ ಇವರು ಎಚ್ಚರಿರುವರೆಂದು ಭಾವಿಸಿ ಶೆಟ್ಟರು ಕೈಯಲ್ಲಿ ಹಿಡಿದುಕೊಂಡೇ ಒಳಕ್ಕೆ ನುಗ್ಗಿದನು. ಮದ್ದಳೆಯ ಧ್ವನಿ ನಿಂತಿತು. ದೂರದಿಂದ ಅವರಿಗೆ ಕಂಡದ್ದು, ಸ್ವರ್ಣಾಳು ಚಿನ್ನನ ದೇಹದ ಮೇಲೆ ಒರಗಿದ್ದು. ಶೆಟ್ಟರು ಕಠಾರಿಯನ್ನೆತ್ತಿ ಅವಳ ಬಳಿ ಹೋದರು. ಹಿಂದಿನಿಂದ ಶಾರದೆ ಬಂದಳು. ಸ್ವರ್ಣಾಳನ್ನು ಎತ್ತಿದಾಗ ಅವಳ ದೇಹವು ತಣ್ಣಗಾಗಿತ್ತು. ಅವಳ ಪ್ರಾಣಪಕ್ಷಿ ಹಾರಿ ಹೋಗಿತ್ತು. ಚಿನ್ನನನ್ನು ನೋಡಿದರೆ, ಅವನ ತಲೆಯೆಲ್ಲ ಒಡೆದು ಹೋಗಿತ್ತು. ಅವರಿಬ್ಬರೂ ಆದಾಗಲೇ ಇಲ್ಲಿಂದ ಹೋಗಿದ್ದರು. ಶೆಟ್ಟರು ಮಾಡಲಿಕ್ಕೆ ಬಂದುದನ್ನು ಚಿನ್ನನು ತಾನೇ ಮಾಡಿಕೊಂಡನು.

ಶಾರದೆ ತುಂಬಾ ಅತ್ತಳು. ತಾನು ಧನಕ್ಕಾಗಿ ಸ್ವರ್ಣಾಳನ್ನು ಪಿಶಾಚಿಯ ಕೈಯಲ್ಲಿ ಹಾಕಿದ್ದೇ ಸ್ವರ್ಣಾಳ ಮೃತ್ಯುವಿಗೆ ಕಾರಣವೆಂದು ಅವಳಿಗೆ ಅರಿವಾಯಿತು. ಇನ್ನೂ ಬೆಳಗು ಹರಿಯುವ ಮುನ್ನ ಇವರಿಬ್ಬರೂ ಹೊರಕ್ಕೆ ಬಂದರು. ಹೊರಕ್ಕೆ ಬಂದ ಮೇಲೆ ಮದ್ದಳೆಯ ಧ್ವನಿ ತಾರಕ್ಕೇರಿತು. ಮದ್ದಳೆಯು ತಾರಕ್ಕೇರಿದಾಗ ಕುಣಿಯುವ ಚಿನ್ನ ಮಾಯವಾಗಿದ್ದನು. ಚಿನ್ನನು ಕುಣಿದಾಗ ಅಮೃತೇಶ್ವರನು ಮದ್ದಳೆ ಬಾರಿಸುತ್ತಿದ್ದನೆಂಬ ಮಾತಿನ ಸತ್ಯತೆ ಎಲ್ಲರಿಗೂ ಅರಿವಾಯಿತು. ಶೆಟ್ಟರ ಹಿಡಿತ ತಪ್ಪಿಸಿಕೊಂಡು ಸ್ವರ್ಣಾಳು ಸ್ವರ್ಗ ಸುಖವನ್ನು ಕಾಣುತ್ತಿದ್ದಳು.

---

# ಪ್ರತಿಭಾ ಗ್ರಂಥಮಾಲೆ, ಧಾರವಾಡ

**ಸಂಪಾದಕರು : ಬಾಲಚಂದ್ರ ಘಾಣೇಕರ**

**ವಾರ್ಷಿಕ ಚಂದಾ : ಅಂಚೆ ಸೇರಿ ಏಳು ರೂ. ಮಾತ್ರ**

ಆಗಸ್ಟದಿಂದ ಆಗಸ್ಟದ ವರೆಗೆ ಒಂದು ವರ್ಷದಲ್ಲಿ ಸಾವಿರ ಪುಟಕ್ಕೂ ಮಿಕ್ಕಿದ ಸರಸ–ಸುಂದರ ಸಾಹಿತ್ಯವು ಚಂದಾದಾರರಿಗೆ ದೊರೆಯುತ್ತದೆ.

ಚಂದಾದಾರರಿಗೆ ನಮ್ಮ ಹಿಂದಿನ ಪ್ರಕಟನೆಗಳು ಮುಕ್ಕಾಲು ಬೆಲೆಗೆ ದೊರೆಯುತ್ತವೆ.

## ೧೫ನೇ ವರ್ಷಾರಂಭವಾಗಿದೆ

೧ **ಬಾಣಭಟ್ಟನ ಆತ್ಮಕಥೆ** (ಡಾ. ಹಜಾರೀಪ್ರಸಾದ) ೩.೫೦
ದಿಲ್ಲಿಯ ಸಾಹಿತ್ಯ ಅಕದೆಮಿಯವರು ಆಯ್ದು ಕೊಟ್ಟ ಪ್ರಶಸ್ತಿ ಪಡೆದಿದೆ

೨ **ಶಿಲಾಮುಖ** ಗೋವಿಂದಮೂರ್ತಿ ದೇಸಾಯಿ ೧.೭೫

೩ **ಪ್ರವಾದಿಯ ತೋಟ** ದೇಸಾಯಿ ದತ್ತಮೂರ್ತಿ ೧.೭೫
ಕಹ್ಲೀಲ್ ಗಿಬ್ರಾನರ ಸುಂದರ ಉಕ್ತಿಗಳ ಸಂಕಲನ

೪ **ಹೇಮಂತೆ** (ಪ್ರಿಯದರ್ಶಿಯವರ ಹೃದಯಂಗಮ ಸರಸ–ಸುಂದರ ಕಾದಂಬರಿ. ಅಚ್ಚಿನಲ್ಲಿದೆ........)

**ಮೇಲಿನ ವಿಳಾಸಕ್ಕೆ ೭ರೂ. ಮನಿಯಾರ್ಡರು ಕಳಿಸಿ ಇಂದೇ ಚಂದಾದಾರರಾಗಿರಿ.**